ತರಾವೀಹ್ ಇಪ್ಪತ್ತು ರಕಅತ್ ಎಂಬುದಕ್ಕೆ ಉಮರ್ (ರ)ರವರ ಚರ್ಯೆಯು ಒಂದು ಪ್ರಧಾನ ಪುರಾವೆಯಾಗಿದೆ. ಅದರ ಕುರಿತು ನಿಷೇಧಿಸಲಸಾಧ್ಯವಾದ ಹಾಗೂ ಕಳಂಕ ರಹಿತ ಹದೀಸುಗಳ ಶೃಂಖಲೆಗಳೇ ವರದಿಯಾಗಿವೆ.

ಬಹು| ಇಮಾಂ ಬೈಹಖೀ (ರ)ರವರು ವರದಿ ಮಾಡುತ್ತಾರೆ,

وَقَدْ أَخْبَرَنَا أَبُو عَبْدِ اللَّهِ : الْحُسَيْنُ بْنُ مُحَمَّدِ بْنِ الْحُسَيْنِ بْنِ فَنْجُوَيْهِ الدِّينَوَرِيُّ بِالدَّامِغَانِ حَدَّثَنَا أَحْمَدُ بْنُ مُحَمَّدِ بْنِ إِسْحَاقَ السُّنِّيُّ أَخْبَرَنَا عَبْدُ اللَّهِ بْنُ مُحَمَّدِ بْنِ عَبْدِ الْعَزِيزِ الْبَغَوِيُّ حَدَّثَنَا عَلِيُّ بْنُ الْجَعْدِ أَخْبَرَنَا ابْنُ أَبِي ذِئْبٍ عَنْ يَزِيدَ بْنِ خُصَيْفَةَ عَنِ السَّائِبِ بْنِ يَزِيدَ قَالَ : كَانُوا يَقُومُونَ عَلَى عَهْدِ عُمَرَ بْنِ الْخَطَّابِ رَضِيَ اللَّهُ عَنْهُ فِي شَهْرِ رَمَضَانَ بِعِشْرِينَ رَكْعَةً

"ಸಾಇಬುಬ್ನುಯಝೀದ್ (ರ)ರವರಿಂದ ವರದಿ. ಉಮರ್ (ರ)ರವರ ಕಾಲದಲ್ಲಿ ಜನರು ಇಪ್ಪತ್ತು ರಕಅತ್ ತರಾವೀಹ್ ನಿರ್ವಹಿಸುತ್ತಿದ್ದರು. ಉಸ್ಮಾನ್ (ರ) ಹಾಗೂ ಅಲೀ (ರ)ರವರ ಕಾಲದಲ್ಲೂ ಇದೇ ರೀತಿ ನಿರ್ವಹಿಸುತ್ತಿದ್ದರು". (ಸುನನುಲ್ ಕುಬ್‌ರಾ 496/2)

ಈ ಹದೀಸು ಸ್ವಹೀಹಾಗಿದೆಯೆಂದು ಈ ಕೆಳಗೆ ಹೇಳಿದ ಎಲ್ಲಾ ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ.

| ಇಮಾಮರುಗಳ ಹೆಸರು | ಗ್ರಂಥದ ಹೆಸರು | ಪುಟ |
|---|---|---|
| 1. ಇಮಾಂ ನವವಿ (ರ) | ಶರ್‌ಹುಲ್ ಮುಹದ್ದಬ್ | 32/4 |
| 2. ಇಮಾಂ ಝೈಲಗೀ (ರ) | ನಸ್‌ಬುರ್‍ರಾಯ | 154/2 |
| 3. ಇಮಾಂ ಸುಯೂತ್ವೀ (ರ) | ಅಲ್ ಹಾವೀ ಲಿಲ್ ಫತಾವಾ | 348/1 |
| 4. ಇಮಾಂ ಖಸ್ತ್ವಲ್ಲಾನಿ (ರ) | ಇರ್ಶಾದುಸ್ಸಾರಿ | 426/3 |
| 5. ಇಮಾಂ ಬದ್ರುದ್ದೀನುಲ್ ಐನೀ (ರ) | ಉಮ್ದತುಲ್ ಖಾರಿ | 178/7 |
| 6. ಇಮಾಂ ಸುಯೂತ್ವಿ (ರ) | ಶರಹುತ್ತಂಬೀಹ್ | 134/1 |
| 7. ಇಮಾಂ ಸುಲೈಮಾನುಲ್ ಜಮಲ್ (ರ) | ಫತೂಹಾತುಲ್ ವಹ್ಹಾಬ್ | 489/1 |
| 8. ಇಮಾಂ ಸುಲೈಮಾನುಲ್ ಬುಜೈರಿಮಿ (ರ) | ಅತ್ತಜ್‌ರೀದ್ ಲಿನಫ್‌ಇಲ್ ಅಬೀದ್ | 282/1 |
| 9. ಇಮಾಂ ಮುರ್ತಳಝ್ಝುಬೀದಿ (ರ) | ಇತ್‌ಹಾಫ್ | 415/3 |
| 10. ಇಮಾಂ ಖತೀಬ್‌ಶಿರ್ಬೀನಿ (ರ) | ಮುಗ್‌ನೀ | 226/1 |
| 11. ಇಮಾಂ ಖಸ್ತ್ವಲ್ಲಾನಿ (ರ) | ಮವಾಹಿಬುಲ್ಲದುನ್ನಿಯ್ಯ | 420/7 |
| 12. ಇಮಾಂ ಮಹ್ಮೂದುಬ್ನು ಅಹ್ಮದಲ್ ಐನೀ (ರ) | ಅಲ್‌ಬಿನಾಯ | 660/2 |
| 13. ಅಲ್ಲಾಮಾ ಸೈಯ್ಯಿದುಲ್ ಬಕ್‌ರೀ (ರ) | ಇಆನತ್ | 265/1 |
| 14. ಇಮಾಂ ಝಕರಿಯ್ಯಲ್ ಅನ್ಸಾರಿ (ರ) | ಅಸ್ನಲ್ ಮತಾಲಿಬ್ | 201/1 |
| 15. ಅಲ್ಲಾಮ ಸಿದ್ದೀಖ್ ಹಸನ್ | ಔನುಲ್ ಬಾರಿ | 861/2 |
| 16. ಅಲ್ಲಾಮ ಮುಸ್ತಫಾ | ತದ್‌ಹೀಬ್ | 50 |
| 17. ಅಲ್ಲಾಮ ಮುಹಮ್ಮದ್ ಇದ್‌ರೀಸ್ | ತಅ್‌ಲೀಖುಸ್ಸಬೀಹ್ | 104/2 |
| 18. ಇಮಾಂ ತಿರ್ಮುಸೀ (ರ) | ಮೌಹಿಬ | 467/2 |
| 19. ಇಮಾಂ ಖಲ್ಯೂಬೀ (ರ) | ಹಾಶಿಯತುಲ್ ಮಹಲ್ಲೀ | 217/1 |
| 20. ಅಸ್ಸಯ್ಯಿದ್ ಉಮರುಲ್ ಬರಕಾತ್ (ರ) | ಫೈಳುಲ್ ಇಲಾಹಿಲ್ ಮಾಲಿಕಿ | 134/1 |
| 21. ಇಮಾಂ ಶರ್ಖಾವೀ (ರ) | ಫತ್‌ಹುಲ್ ಮುಬ್‌ದೀ | 166/1 |
| 22. ಅಲ್ಲಾಮ ಮುಹಮ್ಮದುಲ್ ಹಜ್ಜಾರ್ | ತಅ್‌ಲೀಖ್ ಫತ್‌ಹಿಲ್‌ಅಲ್ಲಾಂ | 26/2 |
| 23. ಅಲ್ಲಾಮ ಮುಹಮ್ಮದು ಝ್ಝುಹೀರ್ | ತಅ್‌ಲೀಖು ಶರಹಿಸ್ಸುನ್ನ | 120/4 |
| 24. ಅಲ್ಲಾಮ ಖಲೀಲ್ ಅಹ್ಮದ್ | ಬದ್‌ಲುಲ್‌ಮಜ್‌ಹೂದ್ | 160/7 |
| 25. ಅಲ್ಲಾಮ ಮುಹಮ್ಮದ್ ಅನ್ವರ್ ಶಾ (ರ) | ಮಆರಿ ಫುಸ್ಸನನ್ | 542/5 |
| 26. ಅಲ್ಲಾಮ ಮುಹಮ್ಮದ್ ಝಕರಿಯ್ಯ (ರ) | ಔಜಝುಲ್ ಮಸಾಲಿಕ್ | 305/2 |

ಹೀಗೆ ಸರ್ವ ವಿದ್ವಾಂಸರೂ ಈ ಹದೀಸು ಸ್ವಹೀಹಾಗಿದೆಯೆಂದು ಒಕ್ಕೊರಳಿನಿಂದ ಪ್ರಖ್ಯಾಪಿಸಿರುವಾಗ ನೂತನವಾದಿಗಳ ಒಬ್ಬ ನೇತಾರನಾದ ಮುಬಾರಕ್ ಪೂರೀ ಎಂಬ ಮೌಲವಿ ಬರೆ

305/2

ಹೀಗೆ ಸರ್ವ ವಿದ್ವಾಂಸರೂ ಈ ಹದೀಸು ಸ್ವಹೀಹಾಗಿದೆಯೆಂದು ಒಕ್ಕೊರಳಿನಿಂದ ಪ್ರಖ್ಯಾಪಿಸಿರುವಾಗ ನೂತನವಾದಿಗಳ ಒಬ್ಬ ನೇತಾರನಾದ ಮುಬಾರಕ್ ಪೂರೀ ಎಂಬ ಮೌಲವಿ ಬರೆಯುವುದನ್ನು ನೋಡಿ,

وصحح إسناده النووي وغيره قلت في إسناده أبو عبد الله بن فنجويه الدينوري ولم أقف على ترجمته فمن يدعي صحة هذا الأثر فعليه أن يثبت كونه ثقة قابلا للاحتجاج

"ಇಮಾಂ ನವವೀ (ರ) ಹಾಗೂ ಇತರ ವಿದ್ವಾಂಸರು ಈ ಹದೀಸಿನ ಪರಂಪರೆಯು ಸ್ವಹೀಹಾಗಿದೆಯೆಂದು ಹೇಳಿದ್ದಾರೆ. ಆದರೆ ಅದರಲ್ಲಿ ಅಬೂಅಬ್ದಿಲ್ಲಾಹಿ ಫಂಜವೈಹಿ ಎಂಬ ಓರ್ವ ವ್ಯಕ್ತಿ ಇದ್ದಾರೆ. ನಾನು ಅವರ ಚರಿತ್ರೆಯನ್ನು ಕಂಡಿಲ್ಲ. ಆದುದರಿಂದ ಈ ಹದೀಸು ಸ್ವಹೀಹಾಗಿದೆಯೆಂದು ಹೇಳುವವರು ಅವರು ವಿಶ್ವಸ್ಥರೂ ಆಧಾರ ಯೋಗ್ಯರೂ ಎಂದು ಸ್ಥಿರಪಡಿಸಬೇಕು". (ತುಹ್ಫತುಲ್ ಅಹ್‌ವದ್ಸಿ 531/3)

ಇಮಾಂ ನವವಿ (ರ) ರಂತಹ ವಿಶ್ವ ವಿಖ್ಯಾತ ವಿದ್ವಾಂಸರು ಈ ಹದೀಸಿನ ಕುರಿತು ಸ್ವಹೀ ಹಾಗಿದೆಯೆಂದು ಘೋಷಿಸಿರುವಾಗ ತಾನು ಫಂಜವ್ವೈಹಿ ಎಂಬವರ ಚರಿತ್ರೆಯನ್ನು ಕಂಡಿಲ್ಲವೆಂಬ ಕಾರಣಕ್ಕೆ ಹದೀಸನ್ನು ದುರ್ಬಲಗೊಳಿಸಲು ಶ್ರಮಿಸಿದ ಈ ಮೌಲವಿಗೆ ಎಷ್ಟು ಮಾತ್ರ ಬುದ್ಧಿ ಇದೆ? ತಾನು ಅವರ ಚರಿತ್ರೆಯನ್ನು ಕಾಣದ್ದು ತನ್ನ ಅಜ್ಞಾನವೆಂದು ಬಗೆಯದೆ ಹದೀಸು ದುರ್ಬಲಗೊಳಿಸಲು ಯತ್ನಿಸಿದ ಈ ಮೌಲವಿ ಸಾಹೇಬ್ ಮಹಾ (ಅ) ಜ್ಞಾನಿಯೇ ಸರಿ.

ಯತಾರ್ಥದಲ್ಲಿ ಈ ಹದೀಸಿನ ಎಲ್ಲಾ ವರದಿಗಾರರು ವಿಶ್ವಸ್ಥರೂ, ಯೋಗ್ಯರೂ ಆಗಿರುತ್ತಾರೆ. ಆದರೆ ನೂತನವಾದಿಗಳು ಈ ಹದೀಸಿನ ವರದಿಗಾರರ ಸಂಬಂಧಿಸಿ ಕಟ್ಟುಕತೆಗಳನ್ನು ಪ್ರಚುರಪಡಿಸುತ್ತಿರುವುದರಿಂದ ಅವರ ಸಂಬಂಧಿಸಿ ಕೂಲಂಕುಷವಾಗಿ ಪರಿಶೀಲಿಸೋಣ.

**[1] ಅಬೂಅಬ್ದಿಲ್ಲಾಹಿ ಪಂಜವ್ವೈಹಿ**

ಹಿಜರಿ 414ರಲ್ಲಿ ನಿಧನರಾದ ಪ್ರಖ್ಯಾತ ಮುಹದ್ದಿಸರೂ, ವಿದ್ವಾಂಸರೂ ಆಗಿದ್ದರು. ಅವರ ಕುರಿತು ಸಲಫಿಗಳ ಅಂಗೀಕೃತ ವ್ಯಕ್ತಿಯಾದ ದ್ಸಹಬೀ ಹೇಳುತ್ತಾರೆ,

كان ثقة صدوقا

"ಅವರು ವಿಶ್ವಸ್ಥರೂ ಸತ್ಯವನ್ನೇ ನುಡಿಯುವವರೂ ಆಗಿದ್ದಾರು" (ಸಿಯರು ಅಲ್‌ಲಾಮಿನ್ನುಬಲಾಅ್ 384/17]

ಅದೇ ರೀತಿ ದ್ಸಹಬಿಯವರ ತಾರೀಖುಲ್ ಇಸ್ಲಾಂ 344/28ರಲ್ಲೂ ಕಾಣಬಹುದು.

ಬಹು ಅಬುಲ್ ಹಯ್ಯ್ (ರ) ಹೇಳುತ್ತಾರೆ,

وكان ثقة منصفا

"ಅವರು ವಿಶ್ವಸ್ಥರೂ ನೀತಿವಂತರೂ ಆಗಿದ್ದರು". (ಶದ್ಸರಾತುದ್ಸಹಬ್ 200/3)

ಅದೇ ರೀತಿ ದ್ಸಹಬಿಯವರು ತನ್ನ ಇಬರ್ 227/2ರಲ್ಲೂ ಪ್ರಸ್ತಾಪಿಸಿದ್ದಾರೆ.

ನೈಮವಿಯವರು ಹೇಳುತ್ತಾರೆ,

لا يسأل عن مثله

"ಅವರಂತವರನ್ನು ಪರಿಶೀಲಿಸುವ ಅಗತ್ಯವೇ ಇಲ್ಲ". (ಅಷ್ಟು ವಿಶ್ವಸ್ಥರಾಗಿದ್ದಾರೆಂದರ್ಥ) (ತಅ್‌ಲೀಖು ಅಸಾರಿಸ್ಸುನನ್)

ಮಾತ್ರವಲ್ಲ ಅವರು ಪ್ರಖ್ಯಾತ ಹಾಫಿಳೂ, ಮುಹದ್ದಿಸೂ ಆಗಿದ್ದರೆಂದು ಮುಅ್‌ಜಮುಲ್ ಮುಅಲ್ಲಿಫೀನ್ 48/4ರಲ್ಲೂ, ಅಲ್ಲುಬಾಬ್ 441/2ರಲ್ಲೂ ಸ್ಪಷ್ಟಪಡಿಸಲಾಗಿದೆ.

ಇನ್ನು ಇವರ ಕುರಿತು ದ್ಸಹಬಿಯವರು ಕಸೀರು ರಿವಾಯತಿನ್ ಲಿಲ್‌ಮನಾಕಿರಿ (ನಿರಾಕರಿಸಲ್ಪಡುವ ವರದಿಗಳನ್ನು ಧಾರಾಳವಾಗಿ ವರದಿ ಮಾಡುವವರು) ಎಂದು ಹೇಳಿದ್ದಾರೆ. ಆದ್ದರಿಂದ ಅವರು ಆಧಾರ ಯೋಗ್ಯರಲ್ಲ ಎಂದು ಮೌಲವಿಗಳು ಹೇಳುವುದುಂಟು.

ಆದರೆ ಯಥಾರ್ಥದಲ್ಲಿ ದ್ಸಹಬಿ ಹಾಗೆ ಹೇಳಿಲ್ಲ. ಶೀರವೈಹಿ ಎಂಬವರು ಹೇಳಿದ್ದಾಗಿ ತನ್ನ ಸೀಯರಿನಲ್ಲಿ ಪ್ರಸ್ತಾಪಿಸಿದ್ದು ಮಾತ್ರ. ಆದರೆ ಇದು ತಳ್ಳಲ್ಪಟ್ಟ ಆಕ್ಷೇಪವಾಗಿದೆ. ಏಕೆಂದರೆ ಇಮಾಂ ಸುಬ್‌ಕೀ (ರ) ಹೇಳುತ್ತಾರೆ,

أن الجارح لا يقبل منه الجرح وإن فسره في حق من غلبت طاعاته على معاصيه ومادحوه على ذاميه ومزكوه على جارحيه

"ಒಬ್ಬ ವರದಿಗಾರನ ಕುರಿತು ನ್ಯೂನತೆ ಆರೋಪಿಸಿದವರಿಗಿಂತ ಪ್ರಶಂಸಿಸಿದವರೂ, ತೆಗಳಿದವರಿಗಿಂತ ಹೊಗಳಿದವರೂ ಅಧಿಕವಿದ್ದರೆ, ಅದೇ ರೀತಿ ಅವರ ಅಪಕರ್ಮಗಳಿಗಿಂತ ಸತ್ಕರ್ಮಗಳು ಮೀರಿದ್ದರೆ ಅವರ ಕುರಿತು ಒಬ್ಬ ಆಕ್ಷೇಪಗಾರನ ಆಕ್ಷೇಪವನ್ನು ಸ್ವೀಕರಿಸಲಾಗುವುದಿಲ್ಲ". (ತಬಖಾತುಲ್ ಕುಬ್‌ರಾ 190/1)

ಮಾತ್ರವಲ್ಲ ವಿಶ್ವಸ್ಥರೂ ಸತ್ಯಸಂಧರೂ ಆಗಿದ್ದರೆಂಬುದನ್ನು ದ್ಸಹ್‌ಬಿಯವರೇ ಸಮ್ಮತಿಸಿದ ಬಳಿಕ ಪ್ರಸ್ತುತ ಆರೋಪಕ್ಕೆ ಯಾವುದೇ ಸ್ಥಾನವಿಲ್ಲ.

ಅಲ್ಲದೆ ಇಮಾಂ ನವವಿ (ರ)ರವರ ಸಹಿತ ಸರ್ವ ವಿದ್ವಾಂಸರೂ ಫಂಜವೈಹಿ ಸತ್ಯಸಂಧರೂ, ವಿಶ್ವಸ್ಥರೂ ಪ್ರಖ್ಯಾತ ಮುಹದ್ದಿಸರೂ ಆಗಿದ್ದರೆಂದು ಒಕ್ಕೊರಳಿನಿಂದ ಸಮ್ಮತಿಸಿರುವಾಗ ಶೀರವೈಹಿ ಎಂಬವರ ಪ್ರಸ್ತುತ ಆರೋಪವು ಹುರುಳಿಲ್ಲದ್ದಾಗಿದೆ.

ಆದುದರಿಂದ ಪ್ರಸ್ತುತ ಹದೀಸು ಸ್ವಹೀಹಾಗಿದೆಯೆಂದು ಹೇಳುವವರು ಪಂಜವೈಹಿ ವಿಶ್ವಸ್ಥರೆಂದು ಸ್ಥಿರಪಡಿಸಬೇಕು ಎಂಬ ಮುಬಾರಕ್ ಪೂರಿಯ ಸವಾಲು ನುಚ್ಚು ನೂರಾಯಿತಲ್ಲದೆ ಪ್ರಸ್ತುತ ಸವಾಲು ಅವರ ಅಜ್ಞಾನದ ಕಾರಣದಿಂದ ಉದ್ಭವಿಸಿದ್ದಾಗಿದೆ ಎಂಬುದು ವ್ಯಕ್ತವಾಗುತ್ತದೆ.

**[2] ಅಹ್ಮದುಬ್ನು ಮುಹಮ್ಮದುಬ್ನು ಇಸ್‌ಹಾಖುಸ್ಸುನ್ನೀ**

ಹಿಜರಿ 280ರಲ್ಲಿ ಜನಿಸಿ 364ರಲ್ಲಿ ನಿಧನರಾದ ಪ್ರಖ್ಯಾತ ವಿದ್ವಾಂಸರೂ ಯೌಮುನ್ ವಲ್ಲೈಲ ಎಂಬ ಗ್ರಂಥದ ಗ್ರಂಥಕರ್ತರೂ ಆಗಿದ್ದಾರೆ. ಅವರ ಕುರಿತು ದ್ಸಹಬಿ ಹೇಳುತ್ತಾರೆ.

(17ನೇ ಪುಟಕ್ಕೆ)

# ಉಮರ್ (ರ) ಮತ್ತು ತರಾವೀಹ್

(7ನೇ ಪುಟದಿಂದ)

الامام الحافظ الثقة الرجال

ಅವರು ಹಾಫಿಳೂ ವಿಶ್ವಸ್ಥರೂ ಆಗಿದ್ದರು. (ಸಿಯರು ಅಲ್‌ಲಾಮಿನ್ನುಬಲಾಲ್ 255/16)

ಅದೇ ದ್ವಹಬಿಯವರು ಹೇಳುತ್ತಾರೆ,

كان دينا خيرا صدوقا

"ಅವರು ಸತ್ಯವನ್ನೇ ನುಡಿಯುವ ಉತ್ತಮ ಮತಾವಲಂಬಿಯಾಗಿದ್ದರು". (ತದ್ಕಿರತುಲ್ ಹುಪ್ಪಾಳ್ 940/3 ತಾರೀಖುಲ್ ಇಸ್ಲಾಂ 319/26)

ಇಮಾಂ ಸುಬ್‌ಕೀ (ರ) ಹೇಳುತ್ತಾರೆ,

وكان رجلا صالحا فقيها

"ಅವರು ಉತ್ತಮವಾದ ಸಜ್ಜನರೂ ಕರ್ಮಶಾಸ್ತ್ರ ವಿದ್ವಾಂಸರೂ ಆಗಿದ್ದರು". (ತಬಖಾತು ಶ್ಯಾಫಿಇಯ್ಯ 39/3)

ಅದೇ ರೀತಿ ಅಲ್-ಇಬರ್ 117/2, ಇಕ್‌ಮಾಲ್ 501/4, ಲುಬಾಬ್ 150/2 ಮುಂತಾದ ಗ್ರಂಥಗಳಲ್ಲಿ ಇವರ ಚರಿತ್ರೆಯನ್ನು ಕಾಣಬಹುದು.

**[3]** ಅಬ್ದುಲ್ಲಾಹಿಬುನು ಮುಹಮ್ಮದುಬ್ನು ಅಬ್ದುಲ್‌ಅಝೀಝುಲ್ ಬಗವೀ

ಇವರು ಹಿಜರಿ 214ರಲ್ಲಿ ಜನಿಸಿ 317ರಲ್ಲಿ ವಫಾತದ ಪ್ರಖ್ಯಾತ ಹದೀಸು ವಿದ್ವಾಂಸರೂ, ವಿಶ್ವಸ್ಥರೂ ಆಗಿದ್ದರು. ಇವರ ಕುರಿತು ಅಬೂಅಬ್ದಿರ್ರಹ್ಮಾನುಸ್ಸುಲ್ಲಮಿ ಹೇಳುತ್ತಾರೆ.

سالت الدارقطني عن البغوي فقال ثقة جبل امام من الائمة ثبت

"ನಾನು ಇಮಾಂ ದಾರಖುತ್‌ನಿ (ರ)ರವರಲ್ಲಿ ಬಗವಿಯವರ ಕುರಿತು ಕೇಳಿದೆ. ಆಗ

(19ನೇ ಪುಟಕ್ಕೆ)

# ಉಮರ್ (ರ) ಮತ್ತು ತರಾವೀಹ್

(17ನೇ ಪುಟದಿಂದ)

ಅವರು ಹೇಳಿದರು, ಬಗವಿ ವಿಶ್ವಸ್ಥರೂ, ಹದೀಸ್ ವಿದ್ವಾಂಸರುಗಳ ಪೈಕಿ ಪ್ರಮುಖರೂ ಆಗಿರುವರು. (ಸಿಯರುಅಲ್‌ಲಾಮಿನ್ನುಬಲಾಅ್ 453/4)

ಇಬ್ನು ಕಸೀರ್ ಹೇಳುತ್ತಾರೆ.

وكان ثقة حافظا ضابطا

"ಅವರು ವಿಶ್ವಸ್ಥರೂ, ಹಾಫಿಝೂ, ವ್ಯವಸ್ಥಿತವಾಗಿ ವರದಿ ಮಾಡುವವರೂ ಆಗಿದ್ದರು". (ಅಲ್‌ಬಿದಾಯತು ವನ್ನಿಹಾಯ 216/11)

ಇಬ್ನುಲ್ ಜೌಝೀ ಹೇಳುತ್ತಾರೆ,

وكان ثقة رحمه الله

"ಅವರು ವಿಶ್ವಸ್ಥರಾದ ವ್ಯಕ್ತಿಯಾಗಿದ್ದರು". (ಅಲ್-ಮುಂತಳಮ್ 2289/11)

ಬಹು| ಇಮಾಂ ಖತೀಬುಲ್ ಬಗ್ದಾದ್ (ರ)ರವರು ಹೇಳುತ್ತಾರೆ.

وكان ثقة ثبتا مكثرا فهما عارفا

"ಅವರು ವಿಶ್ವಸ್ಥರೂ, ಸುಭದ್ರರೂ, ಅಧಿಕವಾಗಿ ಹದೀಸು ವರದಿ ಮಾಡುವವರೂ, ಬುದ್ಧಿವಂತರೂ ಹಾಗೂ ವಿವರವುಳ್ಳವರೂ ಆಗಿದ್ದರು. (ತಾರೀಖುಲ್ ಬಗ್ದಾದ್ 110/10) ಅದೇ ರೀತಿ ತಬಖಾತುಲ್ ಹನಾಬಿಲ 190/1, ಶದ್ಸರಾತುದ್ಸಹಬ್ 2 75/2, ಮೀಝಾನುಲ್ ಇಅ್‌ತಿದಾಲ್ 492/2, ತದ್ಸ್‌ಕಿರತುಲ್ ಹುಪ್ಫಾಳ್ 737/2 ಮುಂತಾದ ಎಲ್ಲಾ ಗ್ರಂಥಗಳಲ್ಲೂ ಇವರ ಚರಿತ್ರೆಯನ್ನು ಕಾಣಬಹುದು.

**[4] ಅಲಿಯ್ಯುಬ್ನುಲ್ ಜಅದ್**

ಇವರು ಹಿಜರಿ 133ರಲ್ಲಿ ಜನಿಸಿ 230ರಲ್ಲಿ ನಿಧನರಾದ ಇಮಾಂ ಬುಖಾರಿ (ರ)ರವರ ಪರಂಪರೆಯಲ್ಲಿರುವ ಪ್ರಖ್ಯಾತ ವಿದ್ವಾಂಸರೂ ವಿಶ್ವಸ್ಥರೂ ಆಗಿದ್ದಾರೆ. ಇವರ ಕುರಿತು ಇಮಾಂ ನಸಾಈ (ರ)ರವರು ಹೇಳುತ್ತಾರೆ,

وكان صدوقا

"ಅವರು ಸತ್ಯವನ್ನೇ ನುಡಿಯುವವರಾಗಿದ್ದರು". (ತಹ್‌ದ್ಸೀಬುತ್ತಹ್‌ದ್ಸೀಬ್ 291/7)

ಬಹು| ಅಬೂಝುರ್‌ಅತ್ (ರ)ರವರು ಹೇಳುತ್ತಾರೆ,

كان صدوقا في الحديث

"ಅವರು ಹದೀಸಿನ ವಿಷಯದಲ್ಲಿ ಸತ್ಯವನ್ನೇ ಹೇಳುವವರಾಗಿದ್ದರು". (ತಹ್‌ದ್ಸೀಬುಲ್ ಕಮಾಲ್ 350/20)

ಬಹು ಅಬ್ದುಲ್‌ಖಾಲಿಖುಬ್ನುಮನ್ಸೂರ್ (ರ)ರವರು ಹೇಳುತ್ತಾರೆ,

سألت يحيى بن معين عن علي بن الجعد فقال ثقة

"ನಾನು ಯಹ್ಯಾಬ್ನುಮಈನ್‌ರವರಲ್ಲಿ ಅಲಿಯ್ಯುಬ್ನುಲ್‌ಜಅದ್‌ರವರ ಕುರಿತು ಕೇಳಿದೆ. ಆಗ ಅವರು ಹೇಳಿದರು, "ಅಲಿಯ್ಯುಬ್ನುಲ್‌ಜಅದ್ ವಿಶ್ವಸ್ಥರಾದ ವ್ಯಕ್ತಿಯಾಗಿದಾರೆ". (ತಹ್‌ದ್ವೀಬುಲ್ ಕಮಾಲ್ 348/20)

ಬಹು ಸಾಲಿಹುಬ್ನು ಮುಹಮ್ಮದುಲ್ ಅಸದಿ (ರ)ರವರು ಹೇಳುತ್ತಾರೆ,

(علي بن الجعد) ثقة

ಅಲಿಯ್ಯುಬ್ನುಲ್‌ಜಅ್‌ದ್ ವಿಶ್ವಸ್ಥರಾಗಿದ್ದಾರೆ. (ತಹ್‌ದ್ವೀಬುಲ್ ಕಮಾಲ್ 350/20)

ಆದರೆ ನೂತನವಾದಿಗಳು ಇವರ ಕುರಿತು ಸುಳ್ಳಾರೋಪವನ್ನು ಪ್ರಚುರಪಡಿಸುತ್ತಿದ್ದಾರೆ. ಒಬ್ಬ ಮೌಲವಿ ಬರೆಯುವುದನ್ನು ನೋಡಿ,

"ಪ್ರಸ್ತುತ ಹದೀಸಿನ ಪರಂಪರೆಯಲ್ಲಿ ಅಲಿಯ್ಯುಬ್ನುಲ್ ಜಅದ್ ಎಂಬ ಓರ್ವ ವ್ಯಕ್ತಿ ಇದ್ದಾರೆ. ಅವರ ಕುರಿತು ಆಕ್ಷೇಪಿಸಿದವರಿದ್ದಾರೆ. ಶುಅ್‌ಬ ಎಂಬವರಿಂದ ಅವರು ವರದಿ ಮಾಡುವ ಹದೀಸು ಸ್ವೀಕಾರಾರ್ಹವೆಂದಾಗಿದೆ ಯಹ್ಯಾಬ್ನು ಮುಅಯ್ಯನ್ ಹೇಳಿದ್ದು. ಇಮಾಂ ಅಹ್ಮದ್ ಅವರನ್ನು ಆಕ್ಷೇಪಿಸಿದ್ದಾರೆ. ಒಂದು ವೇಳೆ ಇಮಾಂ ಬುಖಾರಿಯವರ ಪರಂಪರೆಯಲ್ಲಿರುವ ವ್ಯಕ್ತಿಯಲ್ಲವೇ ಎಂಬ ಸಮರ್ಥನೆಯನ್ನು ನೀಡಬಹುದು. ಆದರೆ ಇಮಾಂ ಬುಖಾರಿ ಅವರು ಶುಅ್‌ಬ ಎಂಬವರಿಂದ ವರದಿಸಿದ ಹದೀಸುಗಳನ್ನು ಮಾತ್ರ ವರದಿ ಮಾಡಿರುತ್ತಾರೆ. (ಅಲ್-ಇಸ್ಲಾಹ್ 1999 ಜನ - ಪು 17)

ಮೇಲಿನ ಆರೋಪವೆಲ್ಲವೂ ಕೇವಲ ಅವರ ಅಜ್ಞಾನದಿಂದ ಉದ್ಭವಿಸಿದ್ದಾಗಿದೆ. ಏಕೆಂದರೆ ಇಮಾಂ ಮುರ್ತ್ತಳಝ್ಝುಬೀದಿ (ರ) ಹೇಳುತ್ತಾರೆ,

من روي له احد الشيخين فقد جاوز القنطرة ولا يسمع فيه لوم لائم

"ಯಾರಿಂದಾದರೂ ಇಮಾಂ ಬುಖಾರಿಯೋ, ಮುಸ್ಲಿಮೋ ಹದೀಸು ವರದಿ ಮಾಡಿದರೆ ಅವರು ವಿಶ್ವಾಸದ ಸೇತುವೆಯನ್ನು ದಾಟಿದ್ದಾರೆ. ಮಾತ್ರವಲ್ಲ ಅವರ ಕುರಿತು ಒಬ್ಬ ಆಕ್ಷೇಪಗಾರನ ಆಕ್ಷೇಪ ಸ್ವೀಕರಿಸಲಾಗದು". (ಇತ್ತಿಹಾಫ್ 414/5)

ಅದೇ ರೀತಿ ದ್ಸಹಬಿ ತನ್ನ ಮೂಖಿಳ ಪುಟ 80ರಲ್ಲೂ ಸ್ಪಷ್ಟಪಡಿಸಿದ್ದಾರೆ. ಇನ್ನು ಶುಅ್‌ಬ ಎಂಬವರಿಂದ ವರದಿಸಿದ ಹದೀಸುಗಳು ಮಾತ್ರ ಸ್ವೀಕಾರಾರ್ಹವಾಗಿದೆ ಎಂದು ಯಹ್ಯಬ್ನುಮ ಈನ್ ಹೇಳಿದ್ದಾರೆಂಬ ಮೌಲವಿಯ ಆರೋಪ ನಿಜಕ್ಕೂ ದುರ್ವ್ಯಾಖ್ಯಾನವೂ ಸುಳ್ಳಾರೋಪವೂ ಆಗಿದೆ. ಏಕೆಂದರೆ ಯಹ್ಯಬ್ನುಮಈನ್ ಹೇಳಿದ್ದು ಹಾಗಲ್ಲ. ಬದಲು ಶುಅ್‌ಬ ಎಂಬವರಿಂದ ಹದೀಸು ವರದಿ ಮಾಡುವವರ ಪೈಕಿ ಅತ್ಯಂತ ವಿಶ್ವಸ್ಥರೂ ಸ್ವೀಕಾರಾರ್ಹರೂ ಅಲಿಯುಬ್ನುಲ್ ಜಅದ್ ಆಗಿದ್ದಾರೆ ಎಂದಾಗಿದೆ.

ಬಹು। ಇಮಾಂ ಅಸ್ಪಲಾನಿ (ರ) ಹೇಳುವುದನ್ನು ನೋಡಿ,

وقال جعفر بن محمد بن أبي عثمان الطيالسي سمعت يحيى بن معين يقول علي بن الجعد أثبت البغداديين في

شعبة

"ಯಹ್ಯಾಬ್ನು ಮಈನ್‌ರವರಿಂದ ಜಅಫರುತ್ತಯಾಲಿಸಿ ಹೀಗೆ ಉಲ್ಲೇಖಿಸಿದ್ದಾರೆ. ಶುಅ್‌ಬ ಎಂಬವರಿಂದ ಹದೀಸು ವರದಿ ಮಾಡುವ ಬಗ್ದಾದಿಗಳ ಪೈಕಿ ಅಲಿಯ್ಯುಬ್ನು ಜಅದ್ ಅತ್ಯಂತ ಯೋಗ್ಯರಾಗಿದ್ದಾರೆ". (ತಹ್‌ದ್ವೀಬುತ್ತಹ್‌ದ್ವೀಬ್ 292/7)

ಅದೇ ರೀತಿ ದ್ಸಹಬಿ ತನ್ನ ತದ್ಸ್‌ಕಿರತುಲ್ ಹುಪ್ಪಾಳ್ 400/1ರಲ್ಲೂ, ಮಿಝ್ಝೀ ತನ್ನ ತಹ್‌ದ್ವೀಬುಲ್ ಕಮಾಲ್ 349/20ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಮಾತ್ರವಲ್ಲ ಶುಅ್‌ಬ ಎಂಬವರಿಂದಲ್ಲದೆ ಇಬ್ನು ಅಬೀ ದ್ವಿಲ್‌ಬ್, ಸುಫ್‌ಯಾನುಸ್ಸಾರಿ (ರ), ಉಮಯ್ಯ (ರ) ಮಾಲಿಕ್ (ರ), ಮುಂತಾದ ಉನ್ನತ ಹದೀಸು ವಿದ್ವಾಂಸರಿಂದಲೂ ಅವರು ವರದಿ ಮಾಡಿರುತ್ತಾರೆ. ಆದುದರಿಂದ ಶುಅ್‌ಬರಿಗಿಂತಲೂ ಉನ್ನತರಾದ ವ್ಯಕ್ತಿಗಳಿಂದ ಅವರು ಹದೀಸು ವರದಿ ಮಾಡಿರುವಾಗ ಶುಅ್‌ಬರಿಂದ ಉಲ್ಲೇಖಿಸುವ ಹದೀಸು ಮಾತ್ರ ಸ್ವೀಕಾರಾರ್ಹವೆಂಬ ಮೌಲವಿಯ ಆರೋಪ ಅರ್ಥಹೀನವಾಗಿದೆ.

ಮೌಲವಿಯ ಮತ್ತೊಂದು ಆರೋಪವೇನೆಂದರೆ ಇಮಾಂ ಬುಖಾರಿಯವರು ಶುಅ್‌ಬ ಎಂಬವರಿಂದ ಅವರು ವರದಿಸಿದ ಹದೀಸುಗಳನ್ನು ಮಾತ್ರ ವರದಿ ಮಾಡಿರುತ್ತಾರೆ ಎಂಬುದಾಗಿದೆ. ಈ ಆರೋಪವೂ ಅರ್ಥಶೂನ್ಯವಾಗಿದೆ. ಏಕೆಂದರೆ ಇಮಾಂ ಬುಖಾರಿಯೋ ಮುಸ್ಲಿಮೊ ಯಾರಿಂದಾದರೂ ಹದೀಸು ವರದಿ ಮಾಡದಿದ್ದರೆ ಅದು ಅವರ ದುರ್ಬಲತೆಯನ್ನು ಸೂಚಿಸುತ್ತದೆ ಎಂದು ಯಾರೂ ಹೇಳಿಲ್ಲ.

ಇಮಾಂ ಅಹ್ಮದುಬ್ನು ಹಂಬಲ್ ಅವರನ್ನು ಆಕ್ಷೇಪಿಸಿದ್ದಾರೆ ಎಂಬುದಾಗಿದೆ ಮೌಲವಿಯ ಇನ್ನೊಂದು ಆರೋಪ. ಆದರೆ ಅಹ್ಮದುಬ್ನುಹಂಬಲ್ ಮಾತ್ರವಲ್ಲ ಮತ್ತು ಕೆಲವರಿಂದಲೂ ಅಲಿಯುಬ್ನುಲ್‌ಜಅದ್ ಜಹ್‌ಮಿಯಾಗಿದ್ದರು ಎಂಬ ಆರೋಪವು ವರದಿಯಾಗಿದೆ. (ಜಹ್ ಮಿಯ್ಯ ಎಂಬುದು ಹಿಂದಿನ ಕಾಲದಲ್ಲಿದ್ದ ಒಂದು ನೂತನವಾದಿ ಸಂಘಟನೆ) ಆದರೆ ಈ ಆರೋ ಪವು ಸರಿಯಲ್ಲ. ಏಕೆಂದರೆ ಹಾಫಿಳ್ ಮಿಝ್ಝೀ ಹೇಳುತ್ತಾರೆ.

وقال أبو علي الحسين بن إسماعيل الفارسي سألت عبدوس عبد الله بن محمد بن مالك بن هانئ النيسابوري عن حال علي بن الجعد فقال ما أعلم أني لقيت أحفظ منه فقلت كان يتهم بالجهم فقال قد قيل هذا ولم يكن كما قالوا إلا أن ابنه الحسن بن علي كان على قضاء بغداد وكان يقول بقول جهم

ಬಹು| ಅಬೂ ಅಲಿಯ್ಯಿಲ್ ಹುಸೈನ್ ಹೇಳುತ್ತಾರೆ, ನಾನು ಅಬ್ದೂಸ್ ಅಬ್ದುಲ್ಲಾ ಹಿಬ್ನು ಮುಹಮ್ಮದ್‌ರವರಲ್ಲಿ ಅಲಿಯುಬ್ನುಜಅದ್‌ರವರ ಕುರಿತು ಕೇಳಿದೆ. ಆಗ ಅವರು ಹೇಳಿದರು. ಅಲಿಯ್ಯುಬ್ನು ಜಅದ್‌ಗಿಂತ ಹದೀಸು ಕಂಠಪಾಟ ಇರುವ ವ್ಯಕ್ತಿಯನ್ನು ನಾನು ಕಂಡಿಲ್ಲ. ನಾನು ಕೇಳಿದೆ "ಅವರು ಜಹ್‌ಮಿಯಾಗಿದ್ದಾರೆಂದು ಕೆಲವರು ಸಂಶಯಿಸುತ್ತಾರಲ್ಲ?" ಆಗ ಅವರು ಹೇಳಿದರು, "ಹೌದು ಹಾಗೆ ಕೆಲವರು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಅವರ ಪುತ್ರ ಹಸನ್ ಎಂಬವರು ಬಗ್ದಾದಿನ ಖಾಝಿಯಾಗಿದ್ದರು. ಅವರು ಜಹ್‌ಮಿಯ್ಯತ್ತಿನ ವಾದ ಪ್ರತಿ ಪಾದಿಸುತ್ತಿದ್ದರು". (ತಹ್‌ದ್ದೀಬುಲ್‌ಕಮಾಲ್ 346/20)

ಮುಹಮ್ಮದುಬ್ನು ಹಮ್ಮಾದ್ ಹೇಳುತ್ತಾರೆ, "ನಾನು ಯಹ್ಯಾಬ್ನು ಮಈನ್‌ರವರಲ್ಲಿ ಅಲಿಯ್ಯುಬ್ನು ಜಅ್‌ದ್‌ರವರ ಕುರಿತು ಕೇಳಿದೆ. ಆಗ ಅವರು ಹೇಳಿದರು. "ಅಲಿಯ್ಯುಬ್ನುಲ್ ಜಅ್‌ದ್ ವಿಶ್ವಸ್ಥರೂ, ಸತ್ಯವನ್ನೇ ನುಡಿಯುವವರೂ ಆಗಿದ್ದರು". ನಾನು ಕೇಳಿದೆ, "ಅವರ ಕುರಿತು ಕೆಲವು ಆಕ್ಷೇಪಗಳು ಉಂಟಲ್ಲಾ?" ಆಗ ಅವರು ಹೇಳಿದರು. "ಎಂತಹ ಆಕ್ಷೇಪ!? ಅವರು ವಿಶ್ವಸ್ಥರೂ ಸತ್ಯವನ್ನೇ ನುಡಿಯುವವರೂ ಆಗಿದ್ದಾರೆ." (ತಹ್‌ದ್ದೀಬುಲ್‌ಕಮಾಲ್ 348/20)

ಆದುದರಿಂದ ಅಲಿಯ್ಯುಬ್ನು ಜಅದ್‌ರವರ ಕುರಿತು ನೂತನವಾದಿಗಳು ಪ್ರಚರಿಸುವ ಆಕ್ಷೇ ಪಗಳೆಲ್ಲವೂ ವಾಸ್ತವ ವಿರುದ್ಧವಾಗಿದೆಯೆಂದು ಸ್ಪಷ್ಟವಾಗುತ್ತದೆ.

**[5] ಇಬ್ನು ಅಬೀದ್ದಿಅ್‌ಬ್**

ಹಿಜರಿ 80ರಲ್ಲಿ ಜನಿಸಿ 159 ರಲ್ಲಿ ವಫಾತಾದ ಇಮಾಂ ಬುಖಾರಿ ಮತ್ತು ಇಮಾಂ ಮುಸ್ಲಿಂ (ರ)ರವರ ಪರಂಪರೆಯಲ್ಲಿರುವ ಅವಿತರ್ಕಿತವಾದ ವ್ಯಕ್ತಿ ಆಗಿದ್ದಾರೆ. ಆದ್ದರಿಂದ ಇವರನ್ನು ಪರಿ ಶೋಧಿಸುವ ಅಗತ್ಯವೇ ಇಲ್ಲ.

**[6] ಯಝೀದುಬ್ನುಖುಸೈಫಾ**

ಇಮಾಂ ಬುಖಾರಿ (ರ)ರವರ ಪರಂಪರೆಯಲ್ಲಿರುವ ಇವರು ಅತ್ಯಂತ ವಿಶ್ವಸ್ಥರೂ ಸತ್ಯಸಂ ಧರೂ ಆದ ವ್ಯಕ್ತಿಯಾಗಿರುತ್ತಾರೆ. ಇವರು ಕುರಿತು ದ್ಸಹಬಿ ಹೇಳುತ್ತಾರೆ,

وثقه يحيى بن معين

"ಯಹ್ಯಾಬ್ನು ಮಈನ್‌ರವರು ಇವರನ್ನು ವಿಶ್ವಸ್ಥರೆಂದು ಘೋಷಿಸಿದ್ದಾರೆ'. (ಸಿಯರು ಅಲ್‌ಲಾಮಿನ್ನುಬಲಾಅ್ 158/6)

ಹಾಫಿಳ್ ಮಿಝ್ಝೀ (ರ)ರವರು ಹೇಳುತ್ತಾರೆ,

قال ابوبكر الاثرم عن احمد بن حنبل وابو حاتم والنسايئ ثقة

"ಇಮಾಂ ಅಹ್ಮದುಬ್ನು ಹಂಬಲ್ (ರ), ಅಬೂಹಾತಿಂ (ರ), ಇಮಾಂ ನಸಾಈ ಮುಂತಾದವರು ಇವರ ಕುರಿತು ವಿಶ್ವಸ್ಥರೆಂದು ಹೇಳಿದ್ದಾಗಿ ಅಬೂಬಕರಿಲ್ ಅಸ್ರಂ ಪ್ರಸ್ತಾಪಿಸಿದ್ದಾರೆ". (ತಹ್‌ದ್ವೀಬುಲ್ ಕಮಾಲ್ 173/32)

ಅದೇ ರೀತಿ ದ್ಸಹಬಿಯವರ ಮೀಝಾನುಲ್ ಇಅ್‌ತಿದಾಲ್ 430/4, ಅಲ್‌ಕಾಶಿಫ್ 246/3, ಇಮಾಂ ಅಸ್ಖಲಾನಿ (ರ)ರವರ ತಕ್‌ರೀಬ್ 367/2, ತಹ್‌ದ್ವೀಬ್ 340/4 ಮುಂತಾದ ಸರ್ವಗ್ರಂಥಗಳಲ್ಲೂ ಕಾಣಬಹುದು.

ಆದರೆ ಇವರ ಕುರಿತು ಒಬ್ಬ ಮೌಲವಿ ಬರೆಯುವುದನ್ನು ನೋಡಿ - "ಇವರು ಇಮಾಂ ಬುಖಾರಿ (ರ)ರವರ ಪರಂಪರೆಯಲ್ಲಿರುವ ವ್ಯಕ್ತಿಯಾಗಿದ್ದರೂ ತನ್ನ ಕಾಲದವರಿಂದ ಮುನ್‌ಕರಾದ (ನಿರಾಕರಿಸಲ್ಪಡುವ) ಹದೀಸುಗಳನ್ನು ವರದಿ ಮಾಡುವವರಾಗಿದ್ದರೆಂದು ಅಹ್ಮದುಬ್ನುಹಂಬಲ್ ಹೇಳಿದ್ದಾಗಿ ಅಬೂದಾವೂದ್‌ರವರಿಂದ ಹಾಫಿಲ್ ಇಬ್ನು ಹಜರಿಲ್ ಅಸ್ಖಲಾನಿ ತನ್ನ ಹದ್‌ಯುಸ್ಸಾರಿ ಪು. 708ರಲ್ಲಿ ಪ್ರಸ್ತಾಪಿಸಿದ್ದಾರೆ. (ಅಲ್-ಇಸ್ಲಾಹ್ 16)

ಮೌಲವಿಗಳು ಗ್ರಂಥಗಳಲ್ಲಿ ನಡೆಸುವ ಹಗಲು ದರೋಡೆಗೆ ಇದೊಂದು ಸ್ಪಷ್ಟ ಉದಾಹರಣೆಯಾಗಿದೆ. ಇಬ್ನು ಹಜರ್ (ರ)ರವರು ಅದರ ನಂತರ ಹೇಳಿದ ಭಾಗವನ್ನು ಈ ಮೌಲವಿ ಮನಪೂರ್ವಕವೇ ಕದ್ದಿದ್ದಾರೆ. ಅವರು ಹೇಳುವುದನ್ನು ನೋಡಿ,

قلت هذه اللفظة يطلقها أحمد على من يغرب على أقرانه بالحديث عرف ذلك بالاستقراء من حاله وقد احتج بابن خصيفة مالك والأئمة كلهم

(ಒಂದು ಹದೀಸು) ತನ್ನ ಕಾಲದವರಿಂದ ಯಾರೂ ವರದಿ ಮಾಡದಿರುವಾಗ ಏಕಾಂಗಿಯಾಗಿ ವರದಿ ಮಾಡುವವರ ಸಂಬಂಧಿಸಿ ಇಮಾಂ ಅಹ್ಮದುಬ್ನು ಹಂಬಲ್ (ರ)ರವರು ಮುಂಕರುಲ್ ಹದೀಸ್ ಎಂಬ ಪದ ಪ್ರಯೋಗಿಸುತ್ತಾರೆ. ಅದು ಅವರ ರೂಢಿಯನ್ನು ಪರಿಶೋಧಿಸಿದಾಗ ತಿಳಿದು ಬಂದಿದೆ. (ಮಾತ್ರವಲ್ಲ) ಇಮಾಂ ಮಾಲಿಕ್ (ರ) ಹಾಗೂ ಎಲ್ಲಾ ಇಮಾಮರುಗಳು ಅವರ ಹದೀಸನ್ನು ಪುರಾವೆ ಮಾಡಿರುತ್ತಾರೆ". (ಹದ್‌ಯುಸ್ಸಾರಿ 708)

ಇಮಾಂ ನವವೀ (ರ)ರವರು ಹೇಳುತ್ತಾರೆ,

انهم يطلقون المنكر على انفراد الثقة بحديث وهذا ليس بمنكر مردود اذا كان الثقة ضابطا متقنا

"ಕೆಲವೊಮ್ಮೆ ಹದೀಸು ವಿದ್ವಾಂಸರು ಮುಂಕರ್ ಎಂಬ ಪದವನ್ನು ಏಕಾಂಗಿಯಾಗಿ ವರದಿ ಮಾಡಿದ ವಿಶ್ವಸ್ಥರ ಮೇಲೆ ಪ್ರಯೋಗಿಸುತ್ತಾರೆ. ಆದರೆ ಆ ವಿಶ್ವಸ್ಥರಾದ ವರದಿಗಾರರು ವ್ಯವಸ್ಥಿತವಾಗಿ ಹದೀಸು ವರದಿ ಮಾಡುವವರೂ, ಹದೀಸಿನಲ್ಲಿ ಬಲಾಢ್ಯರೂ ಆಗಿದ್ದರೆ ಅಂತಹವರ ಹದೀಸು ನಿರಾಕರಿಸಲ್ಪಡಲಾರದು" (ಮುಖದ್ದಿಮತುಲ್ ಮುಸ್ಲಿಂ 5/1)

ಬಹು| ಇಬ್ನುದಖೀಖಿಲ್ ಈದ್ (ರ) ಹೇಳುತ್ತಾರೆ,

وقد قال احمد بن حنبل في محمد بن ابراهيم التيمي يروي احاديث منكرة وهو ممن اتفق عليه الشيخان واليه المرجع في حديث انما الاعمال بالنيات انتهى

"ಬಹು| ಮುಹಮ್ಮದುಬ್ನು ಇಬ್ರಾಹೀಮುತ್ತೈಮೀ ಎಂಬವರ ಸಂಬಂಧಿಸಿ ಅಹ್ಮದುಬ್ನುಹಂಬಲ್‌ರವರು ಮುಂಕರಾದ ಹದೀಸುಗಳನ್ನು ವರದಿ ಮಾಡುವವರೆಂದು ಹೇಳಿದ್ದಾರೆ. ಆದರೆ ಅವರು ಇಮಾಂ ಬುಖಾರಿ (ರ) ಹಾಗೂ ಇಮಾಂ ಮುಸ್ಲಿಂ (ರ)ರವರ ಪರಂಪರೆಯಲ್ಲಿರುವ ಅವಿತರ್ಕಿತವಾದ ವ್ಯಕ್ತಿಯಾಗಿದ್ದಾರೆ. (ಮಾತ್ರವಲ್ಲ) ಇನ್ನಮಲ್ ಅಲ್‌ಮಾಲು ಬಿನ್ನಿಯ್ಯಾತ್ (ಸತ್ಕರ್ಮಗಳು ಸಿಂಧುವಾಗುವುದು ನಿಯ್ಯತ್‌ನಿಂದಾಗಿದೆ) ಎಂಬ ಪ್ರಸಿದ್ಧವಾದ ಹದೀಸಿನ ವರದಿಗಾರರೂ ಆಗಿರುತ್ತಾರೆ'. (ಅರ್ರಫ್‌ಉ ವತ್ತಕ್‌ಮೀಲ್ ಪುಟ 203)

ಬಹು| ಮುಹಮ್ಮದ್ ಅಬ್ದುಲ್ ಹಯ್ಯ್ ಹೇಳುತ್ತಾರೆ,

ان المنكر اذا اطلقه البخاري على الراوي فهو ممن لا تحل الرواية عنه واما اذا اطلقه احمد ومن يحذو حذوه فلا يلزم ان يكون الراوي ممن لا يحتج به

"ಇಮಾಂ ಬುಖಾರಿ (ರ)ರವರು ಯಾವುದೇ ವರದಿಗಾರರ ಸಂಬಂಧಿಸಿ ಮುಂಕರುಲ್ ಹದೀಸ್ ಎಂದು ಹೇಳಿದ್ದರೆ ಅವರಿಂದ ವರದಿ ಮಾಡುವುದು ಸಮ್ಮತಾರ್ಹವಲ್ಲ. (ಆದರೆ) ಇಮಾಂ ಅಹ್ಮದುಬ್ನು ಹಂಬಲ್ ಹಾಗೂ ಅವರ ಶೈಲಿಯನ್ನು ಹಿಂಬಾಲಿಸಿದವರು ಪ್ರಸ್ತುತ ಪದವನ್ನು ಯಾವುದೇ ವರದಿಗಾರರ ಸಂಬಂಧಿಸಿ ಪ್ರಯೋಗಿಸಿದರೆ ಅವರು ಅಯೋಗ್ಯರಾಗುವುದಿಲ್ಲ. (ಅರ್ರಫ್‌ಉ ವತ್ತಕ್‌ಮೀಲ್ ಪು. 210)

ಪುನಃ ಅವರು ಹೇಳುತ್ತಾರೆ, ಪೂರ್ವಿಕರಾದ ವಿದ್ವಾಂಸರೂ, ನಂತರದವರೂ ಪ್ರಸ್ತುತ ಪದ ಪ್ರಯೋಗಿಸುವುದರಲ್ಲಿ ಅಂತರವಿದೆ. ಏಕೆಂದರೆ ಪೂರ್ವಿಕರಾದ ವಿದ್ವಾಂಸರು ಪ್ರಸ್ತುತ ಪದವನ್ನು ತನ್ನ ಕಾಲದವರಿಂದ ಯಾರೂ ವರದಿ ಮಾಡದೆ, ಏಕಾಂಗಿಯಾಗಿ ವರದಿ ಮಾಡುವವರ ಮೇಲೆ ಪ್ರಯೋಗಿಸುತ್ತಾರೆ. (ಅರ್ರಫ್‌ಉ ವತ್ತಕ್ ಮೀಲ್ 211)

ಇನ್ನು ಏಕಾಂಗಿಯಾಗಿ ವರದಿ ಮಾಡುವುದು ಅವರ ದುರ್ಬಲತೆಯನ್ನು ಸೂಚಿಸುವುದಿಲ್ಲ. ಹೊರತು ಅವರ ಉನ್ನತ ಪದವಿಯನ್ನು ಅದು ತಿಳಿಸುತ್ತದೆ. ದ್ವಹಬಿಯವರೇ ಹೇಳುತ್ತಾರೆ,

الثقة الحافظ اذا انفرد باحاديث كان ارفع له واكمل لرتبته وادل على اعتنائه بعلم الاثر وضبطه دون اقرانه

"ವಿಶ್ವಸ್ಥರೂ ಹಾಫಿಳೂ ಆದ ವ್ಯಕ್ತಿಯೊಬ್ಬರು ಕೆಲವು ಹದೀಸುಗಳಲ್ಲಿ ಏಕಾಂಗಿಯಾದರೆ ಅದು ಅವರ ಉನ್ನತ ಪದವಿ ಹಾಗೂ ಪಾಂಡಿತ್ಯವನ್ನು ಸೂಚಿಸುತ್ತದೆ. ಮಾತ್ರವಲ್ಲ ಹದೀಸಿನ ವಿಷಯದಲ್ಲಿ ಅತ್ಯಂತ ಕಾಳಜಿಯುಳ್ಳವರಾಗಿದ್ದಾರೆ ಎಂಬುದನ್ನೂ ತಿಳಿಸುತ್ತದೆ. (ಮೀಝಾನುಲ್ ಇಲ್‌ತಿದಾಲ್ 140/3)

ಇನ್ನು ಬಹು| ಅಹ್ಮದುಬ್ನು ಹಂಬಲ್‌ರವರಿಂದ ಪ್ರಸ್ತುತ ಆರೋಪವು ಸ್ಥಿರಪಟ್ಟಿಲ್ಲವೆಂದೇ ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಬಹು| ಅದ್ವಾದ್ ಮಲ್‌ರೂಫ್ ಎಂಬವರು ಹೇಳುತ್ತಾರೆ.

هذا شيء لم يثبت عن احمد

"ಪ್ರಸ್ತುತ ಆರೋಪವು ಅಹ್ಮದುಬ್ನು ಹಂಬಲ್ (ರ)ರವರಿಂದ ಸ್ಥಿರಪಟ್ಟಿಲ್ಲ". (ತಲ್‌ಲೀಖು ತಹ್‌ದ್ವೀಬಿಲ್ ಕಮಾಲ್ 173/32)

ಮಾತ್ರವಲ್ಲ ಅಹ್ಮದುಬ್ನುಹಂಬಲ್ (ರ)ರವರೇ ಅವರು ವಿಶ್ವಸ್ಥರಾಗಿದ್ದರೆಂದು ಹೇಳಿದ್ದಾಗಿ ಅಬೂಕರುಲ್ ಅಸ್ರಂರವರಿಂದ ಹಾಫಿಳ್ ಮಿಝ್ಝೀ ತನ್ನ ತಹ್‌ದ್ವೀಬುಲ್ ಕಮಾಲ್ 173/32 ರಲ್ಲಿ ಪ್ರಸ್ತಾಪಿಸಿದ್ದು ಇದಕ್ಕೆ ದೊಡ್ಡ ಪುರಾವೆಯಾಗಿದೆ.

ಆದುದರಿಂದ ಯಝೀದುಬ್ನುಖುಸೈಫಾರ ಕುರಿತು ನೂತನವಾದಿಗಳು ಪ್ರಚರಿಸುವ ಆರೋಪಗಳೆಲ್ಲವೂ ಕುಪ್ರಚಾರವೆಂದು ಸ್ಪಷ್ಟವಾಗುತ್ತದೆ.

ಇನ್ನು ಈ ಹದೀಸಿನಲ್ಲಿ ಉಸ್ಮಾನ್ (ರ) ಹಾಗೂ ಅಲಿಯ್ಯ್ (ರ)ರವರ ಕಾಲದಲ್ಲೂ ಅದೇ ಪ್ರಕಾರವಾಗಿತ್ತು ಎಂಬ ಭಾಗ ಸುನನುಲ್ ಕುಬ್‌ರಾದಲ್ಲಿ ಇಲ್ಲ. ಅದು ಸುನ್ನಿಗಳು ಸ್ವಂತವಾಗಿ ನಿರ್ಮಿಸಿದ್ದಾಗಿದೆ ಎಂದು ಮೌಲವಿಗಳು ಹೇಳುವುದುಂಟು. ಆದರೆ ಇದು ಸುಳ್ಳಾರೋಪವಾಗಿದೆ. ಏಕೆಂದರೆ ಬಹು| ಇಮಾಂ ಬದ್ರುದ್ದೀನುಲ್ ಐನೀ (3j)ರವರು ತನ್ನ ಉಂದತುಲ್ ಖಾರಿ 178/7ರಲ್ಲೂ, ಇಮಾಂ ಮುರ್ತಳಝ್ಝುಬೀದಿ (ರ) ತನ್ನ ಇತ್‌ಹಾಫ್ 415/3ರಲ್ಲೂ, ಬಹು| ಅಬ್ದುಲ್ ಹಯ್ಯ್ ತನ್ನ ತಲ್‌ಲೀಖುಲ್ ಮುಮಜ್ಜದ್ 629/1ರಲ್ಲೂ, ಬಹು| ಇಮಾಂ ಮಹ್ಮೂದುಬ್ನು ಅಹ್ಮದುಲ್ ಐನೀ (ರ) ತನ್ನ ಅಲ್-ಬಿನಾಯ 660/2ರಲ್ಲೂ ಈ ಹದೀಸನ್ನು ವರದಿ ಮಾಡಿದ್ದಾರೆ. ಅವೆಲ್ಲದರಲ್ಲೂ ಪ್ರಸ್ತುತ ಭಾಗವಿದೆ. ಆದುದರಿಂದ ಮೌಲವಿ ಕಂಡ ಪ್ರತಿಯಲ್ಲಿ ಈ ಭಾಗ ವಿಲ್ಲವೆಂಬ ಮಾತ್ರಕ್ಕೆ ಅದು ಸ್ವನಿರ್ಮಿತವಾದುದೆಂಬ ವಾದವು ಅರ್ಥಶೂನ್ಯವಾಗಿದೆ.

ಇಮಾಂ ಬೈಹಖೀ (ರ) ವರದಿ ಮಾಡುತ್ತಾರೆ, ಹದೀಸು ನಂಬ್ರ 2

عن يزيد بن خصيفة ، عن السائب بن يزيد قال : " كنا نقوم في زمان عمر بن الخطاب بعشرين ركعة والوتر

ಸಾಇಬುಬ್ನುಯಝೀದ್ (ರ)ರವರಿಂದ ನಿವೇದನೆ : ಅವರು ಹೇಳುತ್ತಾರೆ. "ಉಮರ್ (ರ) ರವರ ಕಾಲದಲ್ಲಿ ನಾವು ಇಪ್ಪತ್ತು ರಕಅತ್ ತರಾವೀಹ್ ಮತ್ತು ವಿತ್ರೂ ನಿರ್ವಹಿಸುತ್ತಿದ್ದೆವು". (ಮಲ್‌ರಿಫತುಸ್ಸುನನಿ ವಲ್‌ಅಸಾರ್ 42/4)

ಈ ಹದೀಸು ಸ್ವಹೀಹಾಗಿದೆಯೆಂದು ಇಮಾಂ ನವವಿ (ರ)ರವರು ತನ್ನ ಖುಲಾಸದಲ್ಲಿ

(ಖುಲ್-ಫತುಸ್ಸನೀ ...

ಈ ಹದೀಸು ಸ್ವಹೀಹಾಗಿದೆಯೆಂದು ಇಮಾಂ ನವವಿ (ರ)ರವರು ತನ್ನ ಖುಲಾಸದಲ್ಲಿ
ಹೇಳಿದ್ದಾಗಿ ಮುಲ್ಲಾ ಅಲಿಯ್ಯುಲ್ ಖಾರಿ (ರ) ತನ್ನ ಮಿರ್ಖಾತ್ 175/2ರಲ್ಲೂ, ಇಮಾಂ
ಸುಬ್‌ಕೀ (ರ)ರವರು ತನ್ನ ಶರಹುಲ್ ಮಿನ್‌ಹಾಜ್‌ನಲ್ಲಿ ಹೇಳಿದ್ದಾಗಿ ಇಮಾಂ ಸುಯೂತ್ವಿ (ರ)
ತನ್ನ ಅಲ್-ಹಾವೀ ಲಿಲ್ ಫತಾವಾ 350/1ರಲ್ಲೂ, ಇಮಾಂ ಇಬ್ನುಲ್ ಇರಾಕಿ ತನ್ನ ಶರ
ಹುತ್ತಖ್‌ರೀಬಿನಲ್ಲಿ ಹೇಳಿದ್ದಾಗಿ ನೈಮವೀ ತನ್ನ ತಅ್‌ಲೀಖುಅಸಾರಿಸ್ಸುನನ್ 54/2ರಲ್ಲೂ ಬಹು
ಇಮಾಂ ಮುಹಮ್ಮದುಬ್ನು ಅಬ್ದಿಲ್ ವಾಹಿದಿಸ್ಸೀರಾಸೀ (ರ) ತನ್ನ ಫತ್‌ಹುಲ್ ಖದೀರ್ 485/
1ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಆದರೆ ನೂತನವಾದಿಗಳು ಈ ಹದೀಸಿನ ಪರಂಪರೆಯ ಕುರಿತೂ ಕುಪ್ರಚಾರವನ್ನು ನಡೆ
ಸುತ್ತಿದ್ದಾರೆ. ಒಬ್ಬ ಮೌಲವಿ ಬರೆಯುವುದನ್ನು ನೋಡಿ, "ಇದರ ಪರಂಪರೆಯಲ್ಲಿ ಖಾಲಿದುಬ್ನು
ಮಖ್‌ಲದ್ ಎಂಬ ವ್ಯಕ್ತಿ ಇದ್ದಾರೆ. ಅವರು ಹಲವು ಆಕ್ಷೇಪಗಳಿಗೆ ವಿಧೇಯರಾಗಿದ್ದಾರೆ.
ಅವರು ಮುಂಕರಾದ ಹದೀಸುಗಳನ್ನು ವರದಿ ಮಾಡುವವರಾಗಿದ್ದಾರೆ ಎಂದು ಅಹ್ಮದುಬ್ನು
ಹಂಬಲ್ (ರ)ರವರು ಹೇಳಿದ್ದಾಗಿ ಹದ್‌ಯುಸ್ಸಾರಿ ಪುಟ 629ರಲ್ಲಿ ಕಾಣಬಹುದು. ಅವರು
ಇಮಾಂ ಬುಖಾರಿ (ರ)ರವರ ಫರಂಪರೆಯಲ್ಲಿರುವ ವ್ಯಕ್ತಿಯಾಗಿದ್ದರೂ ಇಮಾಂ ಬುಖಾರಿ (ರ)
ರವರು ಅವರ ಮಂಕರಾದ ಹದೀಸುಗಳನ್ನು ಉಲ್ಲೇಖಿಸಿಲ್ಲ. (ಅಲ್-ಇಸ್ಲಾಹ್ 1999 ಜನ
16)

ಇದೆಲ್ಲವೂ ಅರ್ಥ ಶೂನ್ಯವಾದ ಆರೋಪಗಳಾಗಿದೆ. ಏಕೆಂದರೆ ಇಮಾಂ ಬುಖಾರಿ (ರ)
ರವರ ಪರಂಪರೆಯಲ್ಲಿರುವ ವ್ಯಕ್ತಿಯ ಕುರಿತು ಯಾರಾದರೂ ಆಕ್ಷೇಪಿಸಿದರೆ ಪ್ರಸ್ತುತ ಆರೋ
ಪವು ಅಸ್ವೀಕಾರವಾಗಿದೆ ಎಂದು ದ್ದಹಬಿ ಹೇಳಿದ್ದನ್ನು ಮುಂಚೆ ತಿಳಿಸಲಾಗಿದೆ. ಇನ್ನು ಇಮಾಂ
ಅಹ್ಮದ್ ಬಿನ್ ಹಂಬಲ್ (ರ)ರವರು ಒಬ್ಬ ವರದಿಗಾರರ ಕುರಿತು ಮುಂಕರುಲ್ ಹದೀಸ್
ಎಂದು ಹೇಳಿದರೆ ಅದರ ತಾತ್ಪರ್ಯವೇನೆಂದು ಈಗಾಗಲೇ ಸ್ಪಷ್ಟಪಡಿಸಲಾಗಿದೆ. ಅದೂ ಅಲ್ಲದೆ
ಇಮಾಂ ಇಬ್ನು ಅದಿಯ್ಯ್ ತನ್ನ ಅಲ್-ಕಾಮಿಲ್ ಎಂಬ ಗ್ರಂಥದಲ್ಲೂ, ದ್ದಹಬೀ ತನ್ನ ಮೀಝಾ
ನಿನಲ್ಲೂ ಇವರ ಮುಂಕರಾದ (ತನ್ನ ಕಾಲದವರಿಂದ ಏಕಾಂಗಿಯಾಗಿ ವರದಿ ಮಾಡಿದ) ಹದೀಸು
ಗಳನ್ನು ಉದ್ಧರಿಸಿದ್ದಾರೆ. ಅವುಗಳಲ್ಲಿ ತರಾವೀಹ್‌ನ ಕುರಿತು ಅವರು ವರದಿ ಮಾಡಿದ ಪ್ರಸ್ತುತ
ಹದೀಸನ್ನು ಉದ್ಧರಿಸಲೇ ಇಲ್ಲ. ಆದುದರಿಂದ ಇಮಾಂ ಬುಖಾರಿಯವರು ಅವರ ಮುಂಕರಾದ

ಹದೀಸನ್ನು ವರದಿ ಮಾಡಲಿಲ್ಲವೆಂದು ಮೌಲವಿ ಹೇಳಿದಂತೆ ಪ್ರಸ್ತುತ ಹದೀಸೂ ಅವರ ಮುಂಕರಾದ ಹದೀಸಲ್ಲವೆಂದು ಸ್ಪಷ್ಟವಾಗುತ್ತದೆ.

ಇನ್ನು ಇವರ ಕುರಿತು ಕೆಲವರು ಶಿಯಾ ಎಂದು ಆಕ್ಷೇಪಿಸಿದ್ದಾರೆ. ಆದರೆ ಅದಕ್ಕೆ ಉತ್ತರವಾಗಿ ಇಮಾಂ ಅಸ್ಖಲಾನಿ (ರ) ಹೇಳುತ್ತಾರೆ "ನೂತನವಾದಿಗಳಾದ ವರದಿಗಾರರು ಹದೀಸ್ ಶ್ರವಿಸುವುದರಲ್ಲೂ, ಉದ್ಧರಿಸುವುದರಲ್ಲೂ ವಿಶ್ವಸ್ಥರಾಗಿದ್ದರೆ ಯಾವುದೇ ತೊಂದರೆಯಿಲ್ಲ. ಪ್ರತ್ಯೇಕವಾಗಿಯೂ ತನ್ನ ಸಿದ್ಧಾಂತಕ್ಕೆ ಜನರನ್ನು ಆಹ್ವಾನಿಸದಿದ್ದರೆ ಅವರ ಹದೀಸು ಸ್ವೀಕರಿಸುವುದಕ್ಕೆ ಯಾವುದೇ ಅಡಚಣೆಯಿಲ್ಲ". (ಹದ್‌ಯುಸ್ಸಾರಿ ಪುಟ 629) ಇವರ ಕುರಿತು ಮುಹದ್ದಿಸ್‌ಗಳು ಹೇಳಿದ ಮಾತುಗಳನ್ನು ನೋಡಿ,

ಉಸ್ಮಾನುಬ್‌ನು ಅಬೀ ಶೈಬಾ ಹೇಳುತ್ತಾರೆ,

هو ثقة صدوق

"ಅವರು ವಿಶ್ವಸ್ಥರೂ ಸತ್ಯವನ್ನೇ ನುಡಿಯುವವರೂ ಆಗಿದ್ದರು". (ತಹ್‌ದ್ಸೀಬುತ್ತಹ್‌ದ್ಸೀಬ್ 118/3)

ಇಮಾಂ ಅಬೂದಾವೂದ್(ರ)ರವರು ಹೇಳುತ್ತಾರೆ,

صدوق

"ಅವರು ಸತ್ಯವನ್ನೇ ನುಡಿಯುವವರಾಗಿದ್ದರು" (ಮೀಝಾನುಲ್ ಇಅ್‌ತಿದಾಲ್ 640/1)

ಇಮಾಂ ಇಬ್ನು ಹಜರ್ (ರ)ರವರು ಹೇಳುತ್ತಾರೆ,

من كبار شيوخ البخاري

"ಅವರು ಇಮಾಂ ಬುಖಾರಿ (ರ)ರವರ ಉನ್ನತ ಉಸ್ತಾದರುಗಳ ಪೈಕಿ ಓರ್ವರಾಗಿರುತ್ತಾರೆ". (ಹದ್‌ಯುಸ್ಸಾರಿ 629)

ದ್ಸಹಬಿ ಹೇಳುತ್ತಾರೆ, "ಖಾಲಿದುಬ್ನುಮಖ್‌ಲದ್ ಪ್ರಖ್ಯಾತ ಮುಹದ್ದಿಸೂ ಹಾಫಿಳೂ ಆಗಿದ್ದಾರೆ". (ಸಿಯರು ಅಅ್‌ಲಾಮಿನ್ನುಬಲಾಅ್ 217/10)

"ಅದೇ ರೀತಿ ಬಹು! ಯಾಖೂತುಲ್ ಹಮವೀ ತನ್ನ ಮುಅ್‌ಜಮುಲ್ ಬುಲ್ದಾನ್ 375/4ರಲ್ಲೂ ಪ್ರಸ್ತಾಪಿಸಿದ್ದಾರೆ.

... ಮೌಲವಿ ಬರೆಯುವ

40ರಲ್ಲಿ ಪ್ರಸ್ತಾಪಿಸಿದ್ದಾರೆ.

ನೂತನವಾದಿಗಳ ನವ ನೇತಾರನಾದ ಮುಬಾರಕ್ ಪೂರೀ ಎಂಬ ಮೌಲವಿ ಬರೆಯುವುದನ್ನು ನೋಡಿ,

قُلت : فِي سَنَدِهِ أَبُو عُثْمَانُ الْبَصْرِيُّ وَاسْمُهُ عَمْرُو بْنُ عَبْدِ اللّٰهِ قَالَ النيموي فِي تَعْلِيقِ آثَارِ السُّنَنِ : لَمْ أَقِفْ عَلَى مَنْ تَرْجَمَ لَهُ اِنْتَهَى . قُلْت لَمْ أَقِفْ أَنَا أَيْضًا عَلَى تَرْجَمَتِهِ مَعَ التَّفَحُّصِ الْكَثِيرِ وَأَيْضًا فِي سَنَدِهِ أَبُو طَاهِرٌ الْفَقِيهُ شَيْخُ الْبَيْهَقِيِّ وَلَمْ أَقِفْ عَلَى مَنْ وَثَّقَهُ . فَمَنْ اِدَّعَى صِحَّةَ هَذَا الأَثَرِ فَعَلَيْهِ أَنْ يُثْبِتَ كَوْنِ كُلٌّ مِنْهُمَا ثِقَةً قَابِلاً لِلاحْتِجَاجِ

"ಪ್ರಸ್ತುತ ಹದೀಸಿನ ಪರಂಪರೆಯಲ್ಲಿ ಅಮ್ರುಬುನ್ ಅಬ್ದಿಲ್ಲಾಹಿ ಎಂಬ ಹೆಸರಿನಿಂದ ತಿಳಿಯಲ್ಪಡುವ ಅಬೂ ಉಸ್ಮಾನುಲ್ ಬಸರಿ ಎಂಬ ವ್ಯಕ್ತಿಯಿದ್ದಾರೆ. ಅವರ ಚರಿತ್ರೆಯನ್ನು ತಾನು ಕಂಡಿಲ್ಲವೆಂದು ನೈಮವಿಯವರು ತನ್ನ ತಅ್‌ಲೀಖು ಅಸಾರಿಸ್ಸುನನಿನಲ್ಲಿ ಹೇಳಿದ್ದಾರೆ. ಮಾತ್ರವಲ್ಲ ನಾನೂ ಅವರ ಸಂಬಂಧಿಸಿ ತುಂಬಾ ಪರಿಶೀಲಿಸಿದರೂ ನನಗೂ ಅವರ ಚರಿತ್ರೆಯನ್ನು ಕಾಣಲು ಸಾಧ್ಯವಾಗಲಿಲ್ಲ. ಅದೂ ಅಲ್ಲದೆ ಈ ಹದೀಸಿನ ಪರಂಪರೆಯಲ್ಲಿ ಇಮಾಂ ಬೈಹಖಿಯವರ ಗುರುವರ್ಯರಾದ ಅಬೂತ್ವಾಹಿರುಲ್ ಫಕೀಹ್ ಎಂಬ ಓರ್ವ ವ್ಯಕ್ತಿ ಇದ್ದಾರೆ. ಅವರ ಸಂಬಂಧಿಸಿ ವಿಶ್ವಸ್ಥರೆಂದು ಹೇಳಿದ ಯಾರನ್ನೂ ನಾನು ಕಂಡಿಲ್ಲ. ಆದುದರಿಂದ ಈ ಹದೀಸು ಸ್ವಹೀಹಾಗಿದೆಯೆಂದು ವಾದಿಸುವವರು ಅವರಿಬ್ಬರೂ ವಿಶ್ವಸ್ಥರೆಂದು ಸ್ಥಿರಪಡಿಸಬೇಕು!" (ತುಹ್ಫತುಲ್ ಅಹ್ ವದ್ಸಿ 530/3)

ಇಮಾಂ ನವವಿ (ರ), ಇಮಾಂ ಸುಬ್‌ಕೀ (ರ) ಇಮಾಂ ಇಬ್ನುಲ್ ಇರಾಖಿ (ರ) ಮುಂತಾದ ಪ್ರಸಿದ್ಧ ವಿದ್ವಾಂಸರು ಒಕ್ಕೊರೊಳಿನಿಂದ ಈ ಹದೀಸು ಸ್ವಹೀಹಾಗಿದೆಯೆಂದು ಸಮ್ಮತಿಸಿರುವಾಗ ಅಬೂ ಉಸ್ಮಾನ್ ಮತ್ತು ಅಬೂತ್ವಾಹಿರ್ ಎಂಬವರ ಚರಿತ್ರೆಯನ್ನು ತಾನು ಕಂಡಿಲ್ಲವೆಂಬ ನೆಪವೊಡ್ಡಿ ಹದೀಸನ್ನು ದುರ್ಬಲಗೊಳಿಸಲು ವಿಫಲಯತ್ನ ನಡೆಸುವುದು ಅದೆಷ್ಟು ಮಹಾ ಅಜ್ಞಾನವಾಗಿದೆ. ಒಂದು ಹದೀಸಿನ ಕುರಿತು ಸ್ವಹೀಹೆಂದೂ ಅಲ್ಲವೆಂದೂ ತೀರ್ಮಾನಿಸುವ ಅರ್ಹತೆ ಸಹ ಇಲ್ಲದ ಈ ಮೌಲವಿ ತನ್ನ ನೆಲೆಯನ್ನು ಕಿಂಚಿತ್ತಾದರೂ ಅರ್ಥ ಮಾಡಿಕೊಳ್ಳಲಿಲ್ಲ.

ಇನ್ನು ಅವರಿಬ್ಬರ ಚರಿತ್ರೆಯನ್ನು ತಾನು ಕಾಣಲಿಲ್ಲ ಎಂಬುದು ಅವರ ಅಜ್ಞಾನವಾಗಿದೆ. ಯಾವುದಾದರೂ ಸುನ್ನೀ ವಿದ್ಯಾಲಯದಲ್ಲಿ ಕಲಿತಿದ್ದರೆ ಅವರ ಚರಿತ್ರೆಯನ್ನು ಕಾಣಬಹುದಿತ್ತು. ಕಾಮಾಲೆ ರೋಗಿಗೆ ಎಲ್ಲವೂ ಹಳದಿಯಾಗಿ ಕಾಣುವಂತೆ ಸಲಫಿಸಂ ತಲೆಗೆ ಹತ್ತಿದರೆ ಬೇರೆ ಯಾವುದೂ ತಲೆಗೆ ಹತ್ತಲಾರದು. ಪ್ರಸ್ತುತ ವ್ಯಕ್ತಿಗಳಿಬ್ಬರೂ ವಿಶ್ವಸ್ಥರೂ ಸತ್ಯಸಂಧರೂ ಆಗಿರುತ್ತಾರೆ.

ಅಮ್ರುಬ್ನುಅಬ್ದಿಲ್ಲಾಹಿ

ಇವರು ಹಿಜರಿ 334ರಲ್ಲಿ ನಿಧನರಾದ ಮಹಾ ವಿದ್ವಾಂಸರಾಗಿದ್ದಾರೆ. ಇವರ ಕುರಿತು ದ್ಸಹಬಿ ಹೇಳುತ್ತಾರೆ. ಅವರು ಸ್ವಾಲಿಹಾದ ಸೂಫಿವರ್ಯರೂ, ಮಾದರೀ ಯೋಗ್ಯ ಇಮಾಮರೂ ಆಗಿದ್ದರು. (ಸಿಯರುಅಲ್‌ಅಮಿನ್ನುಬಲಾಅ್ 364/15) ಅದೇ ರೀತಿ ಅವರ ಚರಿತ್ರೆಯನ್ನು ದ್ಸಹಬಿಯವರ ತಾರೀಖುಲ್ ಇಸ್ಲಾಂ 109/25ರಲ್ಲೂ ಕಾಣಬಹುದು.

ಅಬೂತ್ವಾಹಿರುಲ್ ಫಕೀಹ್

ಇವರು ಹಿಜರಿ 317ರಲ್ಲಿ ಜನಿಸಿ 410ರಲ್ಲಿ ವಫಾತಾದ ಪ್ರಖ್ಯಾತ ಹದೀಸು ವಿದ್ವಾಂಸರೂ, ಕರ್ಮಶಾಸ್ತ್ರ ಪಂಡಿತರೂ ಆಗಿದ್ದರು. ಇವರ ಕುರಿತು ದ್ದಹಬಿ ಹೇಳುತ್ತಾರೆ.

وكان امام اصحاب الحديث بنيسابور وفقيههم ومفتيهم بلا مدافعة

"ಅವರು ನೈಸಾಬೂರಿನಲ್ಲಿದ್ದ ಹದೀಸು ವಿದ್ವಾಂಸರ, ಕರ್ಮಶಾಸ್ತ್ರ ಪಂಡಿತರ ಹಾಗೂ ಮುಫ್ತಿಗಳ ಅವಿತರ್ಕಿತವಾದ ನೇತಾರರಾಗಿದ್ದರು". (ತಾರೀಖುಲ್ ಇಸ್ಲಾಂ 213/28)

ಇಮಾಂ ಸುಬ್‌ಕೀ (ರ) ರವರು ಹೇಳುತ್ತಾರೆ,

امام المحدثين والفقهاء بنيسابور في زمنه

"ಅವರು ತನ್ನ ಕಾಲದಲ್ಲಿ ನೈಸಾಬೂರಿನಲ್ಲಿದ್ದ ಮುಹದ್ದಿಸುಗಳ ಹಾಗೂ ಕರ್ಮಶಾಸ್ತ್ರ ವಿದ್ವಾಂಸರ ನೇತಾರರಾಗಿದ್ದರು" (ತಬಖಾತುಶ್ಶಾಫಿಇಯ್ಯ 198/4)

ಅದೇ ರೀತಿ ಲುಬಾಬ್ 84/2, ತಹ್‌ದ್ದೀಬುಲ್ ಅಸ್ಮಾಇ ವಲ್ಲುಗಾತ್ 245/2, ಶದ್ದರಾತುದ್ದಹಬ್ 193/3, ಹದ್‌ಯುಲ್ ಆರಿಫೀನ್ 59/2, ತದ್‌ಕಿರತುಲ್ ಹುಫ್ಫಾಳ್ 1051/3, ಇಬರ್ 218/2 ಮುಂತಾದ ಸರ್ವಗ್ರಂಥಗಳಲ್ಲೂ ಇವರ ಚರಿತ್ರೆಯನ್ನು ಕಾಣಬಹುದು.

ಆದರೆ ಇವರ ಸಂಬಂಧಿಸಿ ಮುಬಾರಕ್ ಪೂರಿ ಹೇಳಿದ ಮಾತು ಅತ್ಯಂತ ಹಾಸ್ಯಾಸ್ಪದವಾಗಿದೆ. ಅವರು ಹೇಳುವುದನ್ನು ನೋಡಿ.

لا يلزم من هذا كونه ثقة

ಇಮಾಂ ಸುಬ್‌ಕೀ (ರ)ರವರು ಅವರ ಸಂಬಂಧಿಸಿ ಮುಹದ್ದಿಸುಗಳ ನೇತಾರ ಎಂದು ಹೇಳಿದ್ದರಿಂದ ಅವರು ವಿಶ್ವಸ್ಥರಾಗಬೇಕೆಂದಿಲ್ಲ". (ತುಹ್ಫತುಲ್ ಅಹ್‌ವದ್ಸಿ 530/3)

ಇದು ಮೌಲವಿಯ ಅಜ್ಞಾನತೆಗೆ ಮತ್ತೊಂದು ಕಿರೀಟವಾಗಿದೆ. ಏಕೆಂದರೆ ಯಾರಾದರೂ ವಿಸ್ವಸ್ಥರಲ್ಲದ ಒಬ್ಬ ವ್ಯಕ್ತಿಯನ್ನು ನೇತಾರರಾಗಿ ಅಂಗೀಕರಿಸುವರೇ? ಹಾಗಿದ್ದರೆ ವಿಶ್ವಸ್ಥರಲ್ಲದ ಓರ್ವ ವ್ಯಕ್ತಿಯನ್ನು ನೇತಾರನಾಗಿ ಅಂಗೀಕರಿಸಿದರು ಎಂಬ ಕಾರಣಕ್ಕೆ ಅಂದಿನ ಕಾಲದಲ್ಲಿ ಜೀವಿಸಿದ್ದ ಇಮಾಂ ಬೈಹಖೀ ಸಹಿತ ಎಲ್ಲಾ ವಿದ್ವಾಂಸರೂ ದುರ್ಬಲರೆಂದು ಹೇಳಲು ಈ ಮೌಲವಿಗಳು ತಯಾರಿದ್ದಾರೆಯೇ ಏನು, ತಿಳಿಗೇಡಿತನಕ್ಕೂ ಒಂದು ಮಿತಿಯಿಲ್ಲವೇ?

# ಮೂರನೇ ಹದೀಸು

ಬಹು| ಇಮಾಂ ಅಬ್ದುರ್ರಝಾಖ್ (ರ) ವರದಿ ಮಾಡುತ್ತಾರೆ,

عبد الرزاق عن الأسلمي عن الحارث بن عبد الرحمن بن أبي ذباب عن السائب بن يزيد قال كنا ننصرف من القيام على عهد عمر وقد دنا فروع الفجر وكان القيام على عهد عمر ثلاثة وعشرين ركعة

ಸಾಇಬ್ (ರ)ರವರಿಂದ ನಿವೇದನೆ : ಅವರು ಹೇಳುತ್ತಾರೆ, "ಉಮರ್ (ರ)ಕಾಲದಲ್ಲಿ ನಾವು ತರಾವೀಹ್ ನಮಾಜು ನಿರ್ವಹಿಸಿ ಮರಳುವಾಗ ಸೂರ್ಯೋದಯ ಸಮೀಪಿಸುತ್ತಿತ್ತು. ಅವರ ಕಾಲದಲ್ಲಿ ತರಾವೀಹ್ (ವಿತ್ರ್ ಸಹಿತ)ಇಪ್ಪತ್ತಮೂರು ರಕಅತ್ ನಿರ್ವಹಿಸಲಾಗುತ್ತಿತ್ತು". (ಮುಸನ್ನಫ್ 261/4)

ಈ ಹದೀಸಿನ ಎಲ್ಲಾ ವರದಿಗಾರರು ವಿಶ್ವಸ್ಥರಾಗಿದ್ದಾರೆ. ಆದರೆ ಒಬ್ಬ ಮೌಲವಿ ಬರೆಯುವುದನ್ನು ನೋಡಿ,

ಈ ಹದೀಸಿನ ಪರಂಪರೆಯಲ್ಲಿರುವ ಹಾರಿಸ್ ಎಂಬವರು ಸತ್ಯ ಸಂಧರಾಗಿದ್ದರೂ ಪ್ರಮಾದಗಳು ಸಂಭವಿಸುವ ವ್ಯಕ್ತಿಯಾಗಿದ್ದರು. ಅವರು ಅಯೋಗ್ಯರಾಗಿದ್ದರೆಂದು ಅಲ್‌ಜರಹ್ ವತ್ತಅ್‌ದೀಲ್ ಎಂಬ ಗ್ರಂಥದಲ್ಲಿ ಪ್ರಸ್ತಾಪಿಸಲಾಗಿದೆ. ಇಮಾಂ ಮಾಲಿಕ್ (ರ) ಅವರನ್ನು ಅವಲರಂಬಿಸುತ್ತಿರಲಿಲ್ಲವೆಂದು ಇಮಾಂ ಅಸ್ಪಲಾನಿ ತಹ್‌ದ್ಸೀಬಿನಲ್ಲಿ ಪ್ರಸ್ತಾಪಿಸಿದ್ದಾರೆ. (ಅಲ್ ಇಸ್ಲಾಹ್ 99 ಜನ. ಪು. 17)

ಇದು ಮೌಲವಿಯ ಕುಪ್ರಚಾರವೂ ಕಾಪಟ್ಯವೂ ಆಗಿದೆ. ಅಲ್‌ಜರಹ್ ವತ್ತಅ್‌ದೀಲ್ ಎಂಬ ಗ್ರಂಥದಲ್ಲಿ ಹಾರಿಸ್ ಎಂಬವರು ಪ್ರಮಾದ ಸಂಭವಿಸುವ ವ್ಯಕ್ತಿಯೆಂದೋ, ಅಯೋಗ್ಯರೆಂದೋ ಎಲ್ಲಿಯೂ ಹೇಳಿಲ್ಲ. ಈ ಹೇಳಿಕೆಯು ಶುದ್ಧ ಸುಳ್ಳಾಗಿದೆ. ಹೊರತು ಅದರಲ್ಲಿ ಹೇಳುವುದನ್ನು ನೋಡಿ,

قال يحيى بن معين الحارث بن عبد الرحمن من المتقنين

"ಯಹ್ಯಾಬ್ನು ಮಈನ್ ಹೇಳುತ್ತಾರೆ ; ಹಾರಿಸುಬ್ನು ಅಬ್ದುರ್ರಹ್ಮಾನ್ ಪ್ರಸಿದ್ಧರಾದ ವ್ಯಕ್ತಿಯಾಗಿದ್ದಾರೆ". (ಅಲ್‌ಜರಹ್ ವತ್ತಅ್‌ದೀಲ್ 80/3)

ಇಬ್ನುಹಿಬ್ಬಾನ್ ಹೇಳುತ್ತಾರೆ.

حارث بن عبد الرحمن من المتقنين

ಹಾರಿಸುಬ್ನು ಅಬ್ದುರ್ರಹ್ಮಾನ್ (ಹದೀಸಿನಲ್ಲಿ) ಬಲಿಷ್ಠರಾಗಿದ್ದರು. (ತಹ್‌ದ್ಸೀಬುತ್ತಹ್‌ದ್ಸೀಬ್ 148/2)

ಮಾತ್ರವಲ್ಲ, ಇವರು ಇಮಾಂ ಮುಸ್ಲಿಂರವರ ಪರಂಪರೆಯಲ್ಲಿರುವ ವ್ಯಕ್ತಿಯಾಗಿದ್ದಾರೆ. ಆದುದರಿಂದ ಇವರ ಕುರಿತು ಯಾವುದೇ ಆಕ್ಷೇಪವು ಸ್ವೀಕಾರಾರ್ಹವಲ್ಲ.

ಇನ್ನು ಇಮಾಂ ಮಾಲಿಕ್ (ರ) ಅವರನ್ನು ಅವಲಂಬಿಸಲಿಲ್ಲ ಎಂಬ ನೆಪಕ್ಕೆ ಅವರು ದುರ್ಬಲವಾಗುವುದಿಲ್ಲ. ಇಮಾಂ ಮುಸ್ಲಿಂ (ರ)ರವರು ಇವರ ಹದೀಸನ್ನು ಸ್ವೀಕರಿಸಿರುವಾಗ ಇಮಾಂ

ಮಾಲಿಕ್ (ರ) ಹದೀಸನ್ನು ಉಲ್ಲೇಖಿಸಿಲ್ಲ ಎಂಬ ಮೌಲವಿಯ ಆರೋಪವು ಹುರುಳಿಲ್ಲದ್ದಾಗಿದೆ.

## ನಾಲ್ಕನೇ ಹದೀಸು

ಇಮಾಂ ಅಬ್ದುರ್ರಝಾಖ್ (ರ)ವರದಿ ಮಾಡುತ್ತಾರೆ.

عبد الرزاق عن داود بن قيس وغيره عن محمد بن يوسف عن السائب بن يزيد أن عمر جمع الناس في رمضان على أبي بن كعب وعلى تميم الداري على إحدى وعشرين ركعة يقرؤون بالمئين وينصرفون عند فروع الفجر

ಸಾಇಬ್ (ರ)ರವರಿಂದ ನಿವೇದನೆ : ಉಮರ್ (ರ)ರವರು ಉಬಯ್ಯುಬ್ನು ಕಅಬ್ (ರ) ಹಾಗೂ ತಮೀಮುದ್ದಾರಿ (ರ)ರವರ ನೇತೃತ್ವದಲ್ಲಿ (ವಿತ್ರ್ ಸಹಿತ) ಇಪ್ಪತ್ತೊಂದು ರಕಅತ್ ನಿರ್ವಹಿಸಲು ಜನರನ್ನು ಒಗ್ಗೂಡಿಸಿದರು. ಆಗ ಅವರು ಮಿಊನ್ (ನೂರರಿಂದ ಇನ್ನೂರರವರೆಗೆ ಸೂಕ್ತಗಳಿರುವ ಸೂರತ್) ಸೂರತ್‌ಗಳನ್ನು ಪಠಿಸುತ್ತಿದ್ದರು. ತರಾವೀಹ್‌ನಿಂದ ವಿರಮಿಸುವಾಗ ಸೂರ್ಯೋದಯ ಸಮೀಪಿಸುತ್ತಿತ್ತು. (ಮುಸನ್ನಫ್ ಅಬ್ದಿರ್ರಝ್ಝಾಖ್ 260/4)

ಈ ಹದೀಸಿನ ಎಲ್ಲಾ ವರದಿಗಾರರು ಸತ್ಯಸಂಧರೂ, ವಿಶ್ವಸ್ಥರೂ ಆಗಿರುತ್ತಾರೆ. ಇದರ ಕುರಿತು ಯಾವುದೇ ನ್ಯೂನತೆಗಳನ್ನು ಕಾಣದಿರುವಾಗ ಪರಿಭ್ರಾಂತನಾದ ಮೌಲವಿ ಬರೆಯುವುದನ್ನು ನೋಡಿ.

"ಈ ಹದೀಸು ತರಾವೀಹ್ ಇಪ್ಪತ್ತು ರಕಅತ್ ಎಂಬುದಕ್ಕೆ ಪುರಾವೆ ಮಾಡಲು ಸಾಧ್ಯವಿಲ್ಲ. ಕಾರಣ ಸಾಇಬ್ (ರ)ರವರಿಂದ ಇದನ್ನು ವರದಿ ಮಾಡಿದ್ದು ಮುಹಮ್ಮದುಬ್ನು ಯೂಸುಫ್ ಎಂಬವರಾಗಿದ್ದಾರೆ. ಅವರು ಇಮಾಂ ಮಾಲಿಕ್ (ರ)ರವರಿಗೆ ವರದಿ ಮಾಡಿದ್ದು ಉಮರ್ (ರ) ರವರು ಹನ್ನೊಂದು ರಕಅತ್ ನಿರ್ವಹಿಸಲು ಆಜ್ಞಾಪಿಸಿದರು ಎಂದಾಗಿದೆ. ಮಾತ್ರವಲ್ಲ ಮುಹಮ್ಮದುಬ್ನು ಯೂಸುಫ್‌ರವರಿಂದ ಅಬ್ದುರ್ರಝಾಖ್ (ರ)ರವರಲ್ಲದ ಇತರ ಎಲ್ಲಾ ವಿದ್ವಾಂಸರೂ ಉಲ್ಲೇಖಿಸಿದ್ದು ಹನ್ನೊಂದು ರಕಅತ್ ಆಗಿದೆ. ಆಗ ತಪ್ಪು ಸಂಭವಿಸಿದ್ದು ಎಲ್ಲಿ? ಅಬ್ದುರ್ರಝಾಖ್ ಮಹಾ ಹದೀಸ್ ವಿದ್ವಾಂಸರೂ, ಪೂರ್ವಿಕರೂ ಆಗಿದ್ದಾರೆ. ಆದರೆ ಅವರಿಗೆ ದೃಷ್ಟಿದೋಷ ಉಂಟಾದ ನಂತರ ಅವರು ಉದ್ಧರಿಸುವ ಹದೀಸುಗಳಲ್ಲಿ ತಪ್ಪು ಸಂಭವಿಸುತ್ತಿತ್ತೆಂದು ಇಬ್ನುಸ್ಸಲಾಹ್ ತನ್ನ ಮುಖದ್ದಿಮದಲ್ಲಿ ಹೇಳಿದ್ದಾರೆ. ಆದುದರಿಂದ ಹನ್ನೊಂದು ಎಂದು ಹೇಳುವಲ್ಲಿ ಇಪ್ಪತ್ತೊಂದು ಎಂದು ತಪ್ಪಿ ಹೇಳಲು ಸಾಧ್ಯವಿರುವುದರಿಂದ ಸ್ವಹೀಹ್‌ನ ಎದುರಲ್ಲಿ ಇದು ಪುರಾವೆಯಲ್ಲ. ಅದಲ್ಲದಿದ್ದರೆ ಅವರಿಗೆ ಕುರುಡತ್ವ ಬಾಧಿಸುವುದಕ್ಕಿಂತ ಮುಂಚೆ ಈ ಹದೀಸನ್ನು ಮುಸನ್ನಫ್‌ನಲ್ಲಿ ಪ್ರಸ್ತಾಪಿಸಿದ್ದಾರೆ ಎಂಬುದಕ್ಕೆ ಬೇರೆ ಪುರಾವೆ ಬೇಕು". (ಅಲ್ ಇಸ್ಲಾಹ್ 1999 ಜನ ಪು. 16)

ಇಸ್ಲಾಹ್ 1999 ಜನ ಪು. 16)

ಯಾರೋ ಬರೆದು ಕೊಟ್ಟ ಕಾಗದದ ಚೂರನ್ನು ನೋಡಿ ಲೇಖನಗಳನ್ನು ಬರೆಯುವ ಈ ಮೌಲವಿಗಳು ಅದರ ಆಚೆ ಈಚೆ ನೋಡದೆ ಕೊನೆಗೆ ಜನರೆಡೆಯಲ್ಲಿ ಅಪಮಾನಕ್ಕೀಡಾಗುವುದು ಸರ್ವ ಸಾಮಾನ್ಯವಾಗಿದೆ. ತಮ್ಮ ಅನುಯಾಯಿಗಳ ಅಜ್ಞಾನತೆಯ ಲಾಭ ಪಡೆದು ಅವರ ತಲೆಗೆ ಸುಳ್ಳಿನ ಕಂತೆಗಳನ್ನೇ ತುರುಕಿಸುವುದರಲ್ಲಿ ಈ ಮೌಲವಿಗಳು ನಿಪುಣರಾಗಿದ್ದಾರೆ.

ಇಮಾಂ ಅಬ್ದುರ್ರಝಾಖ್ ಪ್ರಸಿದ್ಧ ಹದೀಸ್ ವಿದ್ವಾಂಸರೂ, ಪಂಡಿತರೂ ಆಗಿದ್ದಾರೆ. ಹಿಜರಿ 126ರಲ್ಲಿ ಜನಿಸಿ 211ರಲ್ಲಿ ವಫಾತಾದ ಅವರು ಇಮಾಂ ಬುಖಾರಿ ಮತ್ತು ಇಮಾಂ ಮುಸ್ಲಿಂ (ರ)ವರ ಪರಂಪರೆಯಲ್ಲಿರುವ ಅವಿತರ್ಕಿತವಾದ ವ್ಯಕ್ತಿಯಾಗಿದ್ದಾರೆ. ಅಲ್ಲದೆ ಮುಸನ್ನಫ್ ಎಂಬ ಜಗತ್ ಪ್ರಸಿದ್ಧ ಹದೀಸ್ ಗ್ರಂಥದ ಗ್ರಂಥಕರ್ತರಾಗಿದ್ದಾರೆ.

ಅವರಿಗೆ ತನ್ನ ಅಂತಿಮ ದಿನಗಳಲ್ಲಿ ದೃಷ್ಟಿ ನಷ್ಟ ಹೊಂದಿತ್ತೆಂದೂ ಅದರ ನಂತರ ಅವರು ವರದಿ ಮಾಡುವ ಹದೀಸುಗಳಲ್ಲಿ ಪ್ರಮಾದ ಸಂಭವಿಸುತ್ತಿತ್ತು ಎಂಬುದಾಗಿದೆ ಮೌಲವಿಯ ಆರೋಪ. ಆದರೆ ಈ ಆರೋಪವು ಅವರ ಗ್ರಂಥದಲ್ಲಿ ಉದ್ಧರಿಸಿದ ಹದೀಸಿಗೆ ಬಾಧಕವಲ್ಲ. ಅವರ ಗ್ರಂಥದಲ್ಲಿ ಉದ್ಧರಿಸಿದ ಹದೀಸುಗಳು ಸ್ವಹೀಹಾಗಿದೆಯೆಂದು ಸರ್ವ ವಿದ್ವಾಂಸರೂ ಹೇಳಿದ್ದಾರೆ.

ಇಮಾಂ ಬುಖಾರಿ (ರ)ರವರು ಹೇಳುತ್ತಾರೆ.

ما حدث من كتاب فهو اصح

"ಅವರು ತನ್ನ ಗ್ರಂಥದಿಂದ ಉದ್ಧರಿಸಿದ ಹದೀಸುಗಳು ಅತ್ಯಂತ ಸ್ವಹೀಹಾಗಿದೆ". (ತಾರೀಖುಲ್ ಕಬೀರ್ 130/6)

ಬಹು| ಇಬ್ನುಹಜರ್ (ರ)ರವರು ಹೇಳುತ್ತಾರೆ.

وقال الأثرم عن أحمد من سمع منه بعد ما عمي فليس بشئ وما كان في كتبه فهو صحيح

ಇಮಾಂ ಅಹ್ಮದ್ (ರ)ರವರು ಹೇಳಿದ್ದಾಗಿ ಅಸ್ರಮ್ (ರ)ರವರು ಪ್ರಸ್ತಾಪಿಸುತ್ತಾರೆ. ಇಮಾಂ ಅಬ್ದುರ್ರಝಾಕ್ (ರ) ಕುರುಡರಾದ ನಂತರ ಯಾರಾದರೂ ಅವರಿಂದ ಹದೀಸು ಶ್ರವಿಸಿದರೆ ಅದಕ್ಕೆ ಯಾವುದೇ ಸ್ಥಾನವಿಲ್ಲ. ಆದರೆ ಅವರ ಗ್ರಂಥದಲ್ಲಿರುವ ಹದೀಸುಗಳು ಸ್ವಹೀಹ್ ಆಗಿವೆ. (ಹದ್'ಯುಸ್ಸಾರಿ 658/1)

ಅದೇ ರೀತಿ ಹಾಫಿಳ್ ಮಿಝ್ಝೀ ತನ್ನ ತಹ್'ದ್ವೀಬುಲ್ ಕಮಾಲ್ 57/18 ರಲ್ಲೂ, ಇಮಾಂ ಅಸ್ಖಲಾನಿ (ರ) ತನ್ನ ತಹ್'ದ್ವೀಬ್ 312/6ರಲ್ಲೂ, ದ್ಸಹಬೀ ತನ್ನ ಮೀಝಾನ್ 610/2ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಆದುದರಿಂದ ಪ್ರಸ್ತುತ ಆರೋಪವು ಈ ಹದೀಸಿಗೆ ಬಾಧಕವಲ್ಲ. ಏಕೆಂದರೆ ಈ ಹದೀಸು ಅವರ ಮುಸನ್ನಫ್ ಎಂಬ ವಿಶ್ವಪ್ರಸಿದ್ಧ ಗ್ರಂಥದಲ್ಲಿ ವರದಿಯಾದುದಾಗಿದೆ. ಆದ್ದರಿಂದ ಈ ಹದೀಸು ಇಮಾಂ ಅಬ್ದುರ್ರಝಾಕ್‌ರವರಿಗೆ ದೃಷ್ಟಿ ನಷ್ಟ ಹೊಂದುವುದಕ್ಕಿಂತ ಮುಂಚೆ ವರದಿ

ಮಾಡಿದ್ದು ಎಂಬುದಕ್ಕೆ ಬೇರೆ ಪುರಾವೆ ಬೇಕು ಎಂಬ ಮೌಲವಿಯ ದಿಟ್ಟ ಸವಾಲು ಸುಟ್ಟು ಬೂದಿಯಾಯಿತು.

ಇನ್ನು ಮುಹಮ್ಮದುಬ್ನು ಯೂಸುಫ್‌ರವರಿಂದ ಅಬ್ದುರ್ರಝಾಖ್ ಅಲ್ಲದ ಇತರ ಎಲ್ಲಾ ವಿದ್ವಾಂಸರೂ ವರದಿ ಮಾಡಿದ್ದು ಹನ್ನೊಂದು ರಕಅತ್ ಆಗಿದೆ ಎಂಬುದು ಶುದ್ಧ ಸುಳ್ಳಾಗಿದೆ. ಅದರ ಕುರಿತು ಮುಂದೆ ವಿಶಾಲವಾಗಿ ವಿವರಿಸಲಾಗುವುದು.

## ಐದನೇ ಹದೀಸು

ಇಮಾಂ ಮುಹಮ್ಮದುಬ್ನು ನಸ್ರ್ (ರ)ರವರು ವರದಿ ಮಾಡುತ್ತಾರೆ.

عن يزيد بن خصيفة عن السائب بن يزيد رضي الله عنه انهم كانوا يقومون في رمضان بعشرين ركعة في زمان زمان عمر بن الخطاب رضي الله عنه

ಸಾಇಬ್ (ರ)ರವರಿಂದ ನಿವೇದನೆ : ಬಹು| ಉಮರ್ (ರ)ರವರ ಕಾಲದಲ್ಲಿ ರಮ್‌ಝಾನಿನಲ್ಲಿ ಜನರು ಇಪ್ಪತ್ತು ರಕಅತ್ ತರಾವೀಹ್ ನಿರ್ವಹಿಸುತ್ತಿದ್ದರು. (ಖಿಯಾಮುಲ್ಲೈಲ್ ಪುಟ 91)

ಅದೇ ರೀತಿ ಬಹು| ಇಮಾಂ ಬದ್ರುದ್ದೀನುಲ್ ಐನೀ (ರ) ತನ್ನ ಉಂದತುಲ್ ಖಾರಿ 127/11ರಲ್ಲೂ, ಇಮಾಂ ತ್ವಹಾವೀ ತನ್ನ ಅಮಾನಿಲ್ ಅಹ್‌ಬಾರ್ ಫೀ ಅಮಾನಿಲ್ ಆಸಾರ್ 275/4ರಲ್ಲೂ, ಬಹು| ಅಲ್ಲಾಮ ಮುಹಮ್ಮದ್ ಝಕರಿಯ್ಯಾ ತನ್ನ ಔಜಝುಲ್ ಮಸಾಲಿಕ್ 301/2ರಲ್ಲೂ ಈ ಹದೀಸನ್ನು ವರದಿ ಮಾಡಿರುತ್ತಾರೆ.

ಈ ಹದೀಸಿನ ಎಲ್ಲಾ ವರದಿಗಾರರೂ ವಿಶ್ವಸ್ಥರೂ ಸತ್ಯಸಂಧರೂ ಆಗಿರುತ್ತಾರೆ.

## ಆರನೇ ಹದೀಸು

ಸಾಇಬ್ (ರ)ರವರಿಂದ ಇಮಾಂ ಮಾಲಿಕ್ (ರ)ರವರು ವರದಿ ಮಾಡುತ್ತಾರೆ. "ಉಮರ್ (ರ)ರವರ ಕಾಲದಲ್ಲಿ ನಾವು ಇಪ್ಪತ್ತು ರಕಅತ್ ತರಾವೀಹ್ ನಿರ್ವಹಿಸುತ್ತಿದ್ದೆವು. (ಮುವತ್ತಾ)

ಈ ಹದೀಸು ಇಮಾಂ ಮಾಲಿಕ್ (ರ)ರವರು ವರದಿ ಮಾಡಿದ್ದಾಗಿ ಬಹು| ಇಮಾಂ ಅಸ್ಕಲಾನಿ (ರ) ತನ್ನ ಫತ್‌ಹುಬಾರಿ 11/6ರಲ್ಲೂ ನೂತನವಾದಿಗಳ ನೇತಾರ ಶೌಕಾನೀ ತನ್ನ ನೈಲುಲ್ ಔತಾರ್ 63/3ರಲ್ಲೂ ಪ್ರಸ್ತಾಪಿಸಿದ್ದಾರೆ.

## ಏಳನೇ ಹದೀಸು

ನೂತನವಾದಿಗಳ ನೇತಾರ ಶೌಕಾನೀ ಹೇಳುತ್ತಾರೆ,

روى محمد بن نصر عن محمد ابن يوسف عن السائب رضي الله عنه انها احدى وعشرون ركعة

"ಸಾಇಬ್ (ರ)ರವರಿಂದ ವರದಿ : (ಉಮರ್ (ರ)ರವರ ಕಾಲದಲ್ಲಿ) ತರಾವೀಹ್ ನಮಾಜು ಇಪ್ಪತ್ತೊಂದು ರಕಅತ್ ಆಗಿತ್ತು (ಖಿಯಾಮುಲ್ಲೈಲ್)

ಈ ಹದೀಸು ಬಹು| ಮುಹಮ್ಮದುಬ್ನು ನಸ್ರ್ ತನ್ನ ಖಿಯಾಮುಲ್ಲೈಲ್‌ನಲ್ಲಿ ವರದಿ ಮಾಡಿದ್ದಾಗಿ ಶೌಕಾನೀ ತನ್ನ ನೈಲುಲ್ ಔತಾರ್ 63/3ರಲ್ಲಿ ಪ್ರಸ್ತಾಪಿಸಿದ್ದಾರೆ.

## ಎಂಟನೇ ಹದೀಸು

ಬಹು| ಇಮಾಂ ಖಸ್ತಲ್ಲಾನಿ (ರ) ಹೇಳುತ್ತಾರೆ.

قال عبد العزيز بن محمد الدراوردي عن محمد بن يوسف عن السائب احدى وعشرون

ಸಾಇಬ್ (ರ)ರವರಿಂದ ವರದಿ (ಉಮರ್ (ರ)ರವರ ಕಾಲದಲ್ಲಿ) ತರಾವೀಹ್ ಇಪ್ಪತ್ತೊಂದು ರಕಅತ್ ಆಗಿತ್ತು. (ಮವಾಹಿಬುಲ್ಲದುನ್ನಿಯ್ಯ 420/7)

ಈ ಹದೀಸ್ ಸ್ವಹೀಹ್ ಆಗಿದೆಯೆಂದು ಇಬ್ನು ಅಬ್ದುಲ್ ಬರ್ರ್ ಪ್ರಸ್ತಾಪಿಸಿದ್ದಾಗಿ ಝುರ್ಖಾನಿ ತನ್ನ ಮವಾಹಿಬ್‌ನ ವ್ಯಾಖ್ಯಾನವಾದ ಇಶ್ರಾಖಿ ಮಸ್ಬಾಬೀಹಿಸ್ಸಿಯರ್ 420/7ರಲ್ಲಿ ಸ್ಪಷ್ಟಪಡಿಸಿದ್ದಾರೆ.

## ಒಂಭತ್ತನೇ ಹದೀಸು

ಇಮಾಂ ಮಾಲಿಕ್ (ರ)ರವರು ವರದಿ ಮಾಡುತ್ತಾರೆ.

وحدثني عن مالك عن يزيد بن رومان أنه قال : كان الناس يقومون في زمان عمر بن الخطاب في رمضان بثلاث وعشرين ركعة

ಯಝೀದುಬ್ನುರೂಮಾನ್ (ರ)ರವರಿಂದ ನಿವೇದನೆ : ಉಮರ್ (ರ)ರವ ಕಾಲದಲ್ಲಿ ಜನರು (ವಿತ್ರ್ ಸಹಿತ) ಇಪ್ಪತ್ತಮೂರು ರಕಅತ್ ನಮಾಜು ಮಾಡುತ್ತಿದ್ದರು. (ಮೂವತ್ತ ಪು. 40)

ಅದೇ ರೀತಿ ಬಹು| ಮುಹಮ್ಮದುಬ್ನುನಸ್ರ್ ತನ್ನ ಖಿಯಾಮುಲ್ಲೈಲ್ 91ರಲ್ಲೂ, ಇಮಾಂ ಬೈಹಖೀ (ರ)ರವರು ತನ್ನ ಮಅ್‌ರಿಫತುಸ್ಸುನನಿ ವಲ್ ಆಸಾರ್ 42/4ರಲ್ಲೂ, ಸುನನುಲ್ ಕುಬ್‌ರಾ 496/2ರಲ್ಲೂ ಮತ್ತು ಶುಅ್‌ಬುಲ್ ಈಮಾನ್ 177/3ರಲ್ಲೂ ಈ ಹದೀಸನ್ನು ವರದಿ ಮಾಡಿದ್ದಾರೆ.

ಇದರ ಪರಂಪರೆ ಉತ್ತಮವಾಗಿದೆಯೆಂದು ಅಲ್ಲಾಮ ಖಲೀಲ್ ಅಹ್ಮದ್ ತನ್ನ ಬದ್ಲ್ ಲುಲ್ ಮಜ್‌ಹೂದ್ 160/7ರಲ್ಲೂ, ಅಲ್ಲಾಮ ಮುಹಮ್ಮದ್ ಝಕರಿಯ್ಯಾ ತನ್ನ ಔಜ ಝುಲ್ ಮಸಾಲಿಕ್ 305/2ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಆದರೆ ಇದರ ಪರಂಪರೆಯಲ್ಲಿರುವ ಯಝೀದುಬ್ನುರೂಮಾನ್ (ರ)ರವರ ಸಂಬಂಧಿಸಿ ಒಬ್ಬ ಮೌಲವಿ ಬರೆಯುವುದನ್ನು ನೋಡಿ,

"ಈ ಯಝೀದುಬ್ನುರೂಮಾನ್ ಎಂಬ ವ್ಯಕ್ತಿ ಯಾರು? ಉಮರ್ (ರ)ರವರ ಕಾಲದಲ್ಲಂತೂ ಇಂತಹ ಒಬ್ಬ ಮನುಷ್ಯನೇ ಇರಲಿಲ್ಲ. ಉಮರ್ (ರ)ರವರನ್ನು ಒಮ್ಮೆಯಾದರೂ ತನ್ನ ಜೀವನದಲ್ಲಿ ಈ ವ್ಯಕ್ತಿಯು ನೋಡಿರುವುದಿಲ್ಲ. ಇನ್ನು ಈ ವ್ಯಕ್ತಿ ಜನಿಸಿದ್ದು ಉಮರ್ (ರ)ರವರ ಕಾಲದ ನಂತರವಾಗಿದೆ. ಇದರಿಂದ ಉಮರ್ (ರ)ರವರು 20 ರಕಅತ್‌ಗಳನ್ನು ನಿರ್ವಹಿಸಿದರೆಂದು ಹೇಳುವ ಹೇಳಿಕೆ ಶುದ್ಧ ತಪ್ಪೆಂದು ಓದುಗರು ಮನಗಾಣಬೇಕು". (ಪವಿತ್ರ ಸಂದೇಶ)

ಇನ್ನೊಬ್ಬ ಮೌಲವಿ ಬರೆಯುತ್ತಾನೆ. "ಈ ಹದೀಸು ಇಮಾಂ ಬೈಹಖೀ ಉದ್ಧರಿಸಿದ ನಂತರ ಇದು ಮುರ್‌ಸಲ್ (ಪರಂಪರೆ ಮುರಿದದ್ದು) ಆಗಿದೆಯೆಂದು ಹೇಳಿದ್ದಾರೆ". ಅಲ್-ಇಸ್ಲಾಹ್ 1999 ಜನ 18)

ಒಟ್ಟಿನಲ್ಲಿ ಯಝೀದುಬ್ನುರೂಮಾನ್ ಉಮರ್ (ರ)ರವರನ್ನು ದರ್ಶಿಸದ ವ್ಯಕ್ತಿಯಾದುದರಿಂದ ಈ ಹದೀಸು ಮುರ್‌ಸಲ್ (ಪರಂಪರೆ ಮುರಿದದ್ದು) ಆಗಿದೆ, ಅಂತಹ ಹದೀಸುಗಳು ಆಧಾರ ಯೋಗ್ಯವಲ್ಲವೆಂದಾಗಿದೆ ಈ ಅಸಾಮಿಗಳ ವಾದ.

ಯಝೀದುಬ್ನುರೂಮಾನ್ ಎಂಬವರು ಹಿಜರಿ 130ರಲ್ಲಿ ನಿಧನರಾದ ಪ್ರಖ್ಯಾತ ಹದೀಸ್ ವಿದ್ವಾಂಸರಾಗಿದ್ದಾರೆ. ಇಮಾಂ ಮಾಲಿಕ್, ನಾಫಿಲ್ (ರ) ಹಿಶಾಮುಬ್ನು ಉರ್‌ವತ್ (ರ) ಝುಹ್‌ರೀ ಮುಂತಾದ ಪ್ರಖ್ಯಾತ ಇಮಾಮರುಗಳ ಗುರುವರ್ಯರಾಗಿದ್ದಾರೆ. ಇದನ್ನು ತಹ್‌ದ್ವೀಬುತ್ತಹ್‌ದ್ವೀಬ್ 325/11ರಲ್ಲೂ, ತಹ್‌ದ್ವೀಬುಲ್ ಕಮಾಲ್123/32ರಲ್ಲೂ ಕಾಣಬಹುದು.

ಮಾತ್ರವಲ್ಲ ಅವರು ಡಮಸ್ಕಸಿನ ಖಾಝಿಯಾಗಿದ್ದರೆಂದು ಶದ್ಸರಾತುದ್ಸಹಬ್ 178/1 ರಲ್ಲಿ ಸ್ಪಷ್ಟಪಡಿಸಲಾಗಿದೆ.

ಇಂತಹ ಘನವೆತ್ತ ವಿದ್ವಾಂಸರ ಸಂಬಂಧಿಸಿ ತಮ್ಮ ಸಿದ್ಧಾಂತಕ್ಕೆ ವಿರುದ್ಧವಾದ ಒಂದು ಹದೀಸನ್ನು ಉದ್ಧರಿಸಿದರು ಎಂಬ ಮಾತ್ರಕ್ಕೆ ಅವರ ಕುರಿತು ದ್ವೇಷದ ಕಿಡಿಕಾರಿ ಅಪಹಾಸ್ಯದ ಮಾತುಗಳನ್ನು ಆಡಿದ ಸಲಫಿಗಳು ತಮ್ಮ ನೀಚ ಸಂಸ್ಕೃತಿಯನ್ನು ಪ್ರದರ್ಶಿಸಿದ್ದಾರೆ ಎಂಬುದನ್ನು ಓದುಗರು ಇಲ್ಲಿ ಮನಗಾಣಬೇಕು.

ಇನ್ನು ಈ ಹದೀಸು ಮುರ್‌ಸಲ್ (ಪರಂಪರೆ ಮುರಿದದ್ದು) ಆಗಿರುವುದರಿಂದ ಸ್ವೀಕಾರಾರ್ಹವಲ್ಲ ಎಂಬ ಮೌಲವಿಯ ಹೇಳಿಕೆಯು ಹದೀಸು ವಿಧಾನ ಶಾಸ್ತ್ರದ ಸಂಬಂಧಿಸಿ ಆತನ ತಿಳಿಗೇಡಿತನದಿಂದ ಉದ್ಭವಿಸಿದ್ದಾಗಿದೆ. ಏಕೆಂದರೆ ಎಲ್ಲಾ ಮುರ್‌ಸಲಾದ ಹದೀಸುಗಳು ಅಯೋಗ್ಯವಲ್ಲ. ಉನ್ನತರಾದ ತಾಬೀವುಗಳ ಮುರ್‌ಸಲಾದ ಹದೀಸುಗಳು, ಅದಕ್ಕೆ ಬಲ ನೀಡುವ ಬೇರೆ ಹದೀಸುಗಳು (ಅದು ಮುರ್‌ಸಲಾದ ಹದೀಸಾದರೂ ಸರಿ) ಬಂದರೆ ಅಂತಹ ಹದೀಸುಗಳು ಸ್ವೀಕಾರಾರ್ಹವಾಗಿದೆ.

ಇಬ್ನು ಕಸೀರ್ ಹೇಳುತ್ತಾರೆ,

قال الشافعي ان مراسيل كبار التابعين حجة ان جائت من وجه اخر ولو مرسلة اواعتضد بقول صحابي او اكثر العلماء

"ಇಮಾಂ ಶಾಫೀ (ರ) ಹೇಳುತ್ತಾರೆ. ಉನ್ನತ ತಾಬೀವುಗಳ ಮುರ್‌ಸಲಾದ ಹದೀಸುಗಳು ಬೇರೆ ಪರಂಪರೆಯಲ್ಲಿ ವರದಿಯಾದರೆ ಅಥವಾ ಸ್ವಹಾಬಿಗಳ, ಅದಲ್ಲದಿದ್ದರೆ ಬಹುತೇಕ ವಿದ್ವಾಂಸರ ಮಾತುಗಳಿಂದ ಬಲಗೊಂಡರೆ ಆ ಹದೀಸು ಸ್ವೀಕಾರಾರ್ಹವೂ ಪುರಾವೆಯೂ ಆಗಿದೆ. (ಇಖ್ತಿಸಾರು ಉಲೂಮಿಲ್ ಹದೀಸ್ ಪು. 15)

ಅದೇ ರೀತಿ ಇಮಾಂ ಸುಬ್‌ಕೀ (ರ) ತನ್ನ ಜಂಉಲ್ ಜವಾಮಿಅ್ 178/2 ರಲ್ಲೂ ಇಮಾಂ ಬೈಹಖೀ ತನ್ನ ದಲಾಯಿಲುನ್ನುಬುವ್ವ 39/1ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಕಿಬಾರುತ್ತಾಬಿಈನ್ (ಉನ್ನತ ತಾಬೀವುಗಳು) ಎಂದರೆ ಸ್ವಹಾಬಿಗಳಿಂದ ಅಧಿಕವಾಗಿ ಹದೀಸ್ ಮಾಡುವವರಾಗಿದ್ದಾರೆಂದು ಬನ್ನಾನಿ 178/2 ರಲ್ಲಿ ಸ್ಪಷ್ಟಪಡಿಸಲಾಗಿದೆ.

ಯಝೀದುಬ್ನುರೂಮಾನ್ ವರದಿ ಅಧಿಕರಿಸಿದವರಾಗಿದ್ದರೆಂದು ಇಮಾಂ ಅಸ್ಖಲಾನಿ (ರ) ತನ್ನ ತಹ್‌ದ್ವೀಬ್ 325/11ರಲ್ಲೂ, ಹಾಫಿಳ್ ಮಿಝ್ಝೀ ತನ್ನ ತಹ್‌ದ್ವೀಬುಲ್ ಕಮಾಲ್ 123/32 ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಯಝೀದುಬ್ನುರೂಮಾನ್ (ರ)ರವರ ಪ್ರಸ್ತುತ ಹದೀಸಿಗೆ ಸಾಇಬುಬ್ನು ಯಝೀದ್ (ರ) ರವರ ಹದೀಸುಗಳೂ, ಸ್ವಹಾಬತ್ತಿನ ಒಮ್ಮತವೂ ಬಲ ನೀಡುವುದರಿಂದ ಅದು ಸ್ವೀಕಾರಾರ್ಹವೂ ಪುರಾವೆಯೂ ಆಗಿದೆ.

## ಹತ್ತನೇ ಹದೀಸು

ಬಹು| ಇಬ್ನು ಅಬೀ ಶೈಬಾ ವರದಿ ಮಾಡುತ್ತಾರೆ.

حَدَّثَنَا وَكِيعٌ ، عَنْ مَالِكِ بْنِ أَنَسٍ ، عَنْ يَحْيَى بْنِ سَعِيدٍ ، أَنَّ عُمَرَ بْنَ الْخَطَّابِ أَمَرَ رَجُلاً يُصَلِّي بِهِمْ عِشْرِينَ رَكْعَةً.

ಯಹ್ಯಾಬ್ನು ಸಈದ್ (ರ)ರವರಿಂದ ವರದಿ : ಬಹು| ಉಮರ್ (ರ)ರವರು ಒಬ್ಬರಲ್ಲಿ ಜನರಿಗೆ ಇಮಾಮರಾಗಿ ಇಪ್ಪತ್ತು ರಕಅತ್ ತರಾವೀಹ್ ನಮಾಜು ನಿರ್ವಹಿಸಲು ಆಜ್ಞಾಪಿಸಿದರು". (ಮುಸನ್ನಫ್ 285/2)

"ಈ ಹದೀಸಿನ ಪರಂಪರೆ ಉತ್ತಮವಾಗಿದೆಯೆಂದು ಅಲ್ಲಾಮ ಮುಹಮ್ಮದ್ ಝಕರಿಯ್ಯಾ ತನ್ನ ಔಜಝುಲ್‌ಮಸಾಲಿಕ್ 305/2ರಲ್ಲೂ, ಅಲ್ಲಾಮಾ ಖಲೀಲ್ ಅಹ್ಮದ್ ತನ್ನ ಬದ್ಸ್ ಲುಲ್ ಮಜ್‌ಹೂದ್ 160/7ರಲ್ಲೂ ಸ್ಪಷ್ಟಪಡಿಸಿದ್ದಾರೆ.

ಆದರೆ ಮುಬಾರಕ್‌ಪೂರಿ ಹೇಳುವುದನ್ನು ನೋಡಿ,

"ಈ ಹದೀಸಿನ ವರದಿಗಾರರು ವಿಶ್ವಸ್ಥರಾಗಿದ್ದಾರೆ. ಆದರೆ ಯಹ್ಯಾಬ್ನುಸಈದುಲ್ ಅನ್ಸಾರಿ ಉಮರ್ (ರ)ರವರನ್ನು ದರ್ಶಿಸಲಿಲ್ಲ ಎಂದು ನೈಮವೀ ಹೇಳಿದ್ದಾರೆ. ಆದುದರಿಂದ ಈ ವರದಿ ಮುಂಖತಿಲ್ (ಪರಂಪರೆ ಮುರಿದದ್ದು) ಆದ ಕಾರಣ ಸ್ವೀಕಾರಾರ್ಹವಲ್ಲ". (ತುಹ್ಫತುಲ್ ಅಹ್ವದ್ಸಿ 528/3)

ಯಹ್ಯಾಬ್ನು ಸಈದ್ ಪ್ರಖ್ಯಾತ ತಾಬೀಊ, ಮದೀನದಲ್ಲಿದ್ದ ಪ್ರಸಿದ್ಧ ವಿದ್ವಾಂಸರೂ ಆಗಿದ್ದರು. ಬಹು। ಅನಸುಬ್ನು ಮಾಲಿಕ್ (ರ), ಸಾಇಬುಬ್ನುಯಝೀದ್ (ರ), ಅಬೂ ಉಮಾಮ (ರ), ಸಈದುಬ್ನು ಮುಸಯ್ಯಬ್ ಮುಂತಾದ ಸ್ವಹಾಬಿಗಳಿಂದಲೂ, ತಾಬೀವುಗಳಿಂದಲೂ ಹದೀಸು ವರದಿ ಮಾಡಿರುತ್ತಾರೆ.

ಬಹು। ಇಬ್ನು ಸಈದ್ (ರ) ಹೇಳುತ್ತಾರೆ.

كان ثقة كثير الحديث حجة ثبت

"ಯಹ್ಯಾಬ್ನು ಸಈದ್ (ರ)ರವರು ವಿಶ್ವಸ್ಥರೂ, ಅತೀ ಹೆಚ್ಚು ವರದಿ ಮಾಡಿದವರೂ, ಆಧಾರ ಯೋಗ್ಯರೂ ಆಗಿರುತ್ತಾರೆ. (ತಹ್ದ್ಸೀಬುತ್ತಹ್ದ್ಸೀಬ್ 222/11)

ಬಹು।ಯಹ್ಯಲ್ ಖತ್ತಾನ್ ಹೇಳುತ್ತಾರೆ.

هو مقدم على الزهري، لان الزهري اختلف عليه، ويحيى لم يختلف عليه.

"ಯಹ್ಯಾಬ್ನು ಸಈದ್ (ರ) ಝುಹ್‌ರಿಯವರಿಗಿಂತಲೂ ಮೇಲ್ದರ್ಜೆಯವರಾಗಿದ್ದಾರೆ. ಏಕೆಂದರೆ ಝುಹ್‌ರಿಯವರ ಕುರಿತು ಭಿನ್ನಾಭಿಪ್ರಾಯಗಳಿವೆ. ಆದರೆ ಯಹ್ಯಬ್ನು ಸಈದ್ (ರ)ರವರ ಸಂಬಂಧಿಸಿ ಯಾರೂ ಭಿನ್ನಾಭಿಪ್ರಾಯ ಪ್ರಕಟಿಸಲಿಲ್ಲ". (ಸಿಯರು ಅಅ್‌ಲಾಮಿನ್ನುಬಲಾಅ್ 475/5)

ಪ್ರಸ್ತುತ ವರದಿಯು ಮುರ್‌ಸಲಾದರೂ ಸಾಇಬುಬ್ನುಯಝೀದ್ (ರ)ರವರ ಹದೀಸುಗಳೂ ಸ್ವಹಾಬಿಗಳ ಒಮ್ಮತವೂ ಇದಕ್ಕೆ ಬಲವನ್ನು ನೀಡುವುದರಿಂದ ಈ ಹದೀಸು ಆಧಾರ ಯೋಗ್ಯವಾಗಿದೆ.

ಮಾತ್ರವಲ್ಲ. ಇವರು ಸಾಇಬುಬ್ನು ಯಝೀದ್ (ರ)ರವರಿಂದ ಹದೀಸು ವರದಿ ಮಾಡುತ್ತಿದ್ದರೆಂದು ದ್ಸಹಬಿಯವರು ತನ್ನ ಸಿಯರು ಅಅ್‌ಲಾಮಿನ್ನುಬಲಾಅ್ 468/5ರಲ್ಲೂ ಇಮಾಂ ಖತೀಬುಲ್ ಬಗ್ದಾದಿ (ರ) ತನ್ನ ತಾರೀಖುಲ್ ಬಗ್ದಾದ್ 101/4ರಲ್ಲೂ ಸ್ಪಷ್ಟಪಡಿಸಿದ್ದಾರೆ. ಆದುದರಿಂದ ಪ್ರಸ್ತುತ ಹದೀಸನ್ನು ಅವರು ಸಾಇಬುಬ್ನು ಯಝೀದ್ (ರ)ರವರಿಂದ ಕೇಳಿರಬಹುದಾಗಿದೆ.

## ಹನ್ನೊಂದನೇ ಹದೀಸು

ಬಹು| ಇಮಾಂ ಅಬೂದಾವೂದ್ (ರ) ವರದಿ ಮಾಡುತ್ತಾರೆ.

عَنِ الْحَسَنِ أَنَّ عُمَرَ بْنَ الْخَطَّابِ جَمَعَ النَّاسَ عَلَى أُبَيِّ بْنِ كَعْبٍ فَكَانَ يُصَلِّى لَهُمْ عِشْرِينَ

ಹಸನ್ (ರ)ರವರಿಂದ ನಿವೇದನೆ : "ಬಹು| ಉಮರ್ (ರ)ರವರು ಉಬಯ್ಯ್‌ಬ್ನು ಕಅಬ್ (ರ)ವರ ನೇತೃತ್ವದಲ್ಲಿ ತರಾವೀಹ್ ನಮಾಜು ಮಾಡಲು ಜನರನ್ನು ಒಗ್ಗೂಡಿಸಿದರು. ಆಗ ಅವರು ಇಪ್ಪತ್ತು ರಕಅತ್‌ಗಳು ನಿರ್ವಹಿಸುತ್ತಿದ್ದರು". (ಅಬೂದಾವೂದ್ 202/1)

ಆ ಹದೀಸು ಉಲ್ಲೇಖಿಸಿದ ನಂತರ ಇಮಾಂ ಅಬೂದಾವೂದ್ ಏನನ್ನೂ ಹೇಳದಿದ್ದರಿಂದ ಈ ಹದೀಸು ಸ್ವಹೀಹ್ ಎಂದು ಪರಿಗಣಿಸಲಾಗುವುದು. ಏಕೆಂದರೆ ಇಮಾಂ ಅಬೂದಾವೂದ್ (ರ) ಹೇಳುತ್ತಾರೆ.

وما لم اذكر فيه شيئا فهو صالح

"ಒಂದು ಹದೀಸಿನ ಕುರಿತು ನಾನು ಏನನ್ನೂ ಹೇಳದಿದ್ದರೆ ಆ ಹದೀಸು ಉತ್ತಮವಾಗಿದೆ". (ಬದ್ಸಲುಲ್ ಮಜ್‌ಹೂದ್ 35/1)

ಆದರೆ ಅಬೂದಾವೂದಿನ ಕೆಲವು ಪ್ರತಿಗಳಲ್ಲಿ ಇಶ್ರೂನ ರಕಅತನ್ (ಇಪ್ಪತ್ತು ರಕಅತ್) ಎಂಬ ಸ್ಥಳದಲ್ಲಿ ಇಶ್ರೂನ ಲೈಲತನ್ (ಇಪ್ಪತ್ತು ರಾತ್ರಿ) ಎಂದಿದೆ. ಆದರೆ ಒಂದು ಪ್ರತಿಯಲ್ಲಿ ಈ ಬದಲಾವಣೆಯಾಗಿದೆ ಎಂಬ ಮಾತ್ರಕ್ಕೆ ಈ ವರದಿಯನ್ನು ನಿರಾಕರಿಸುವುದು ತಿಳಿಗೇಡಿತನದ ಲಕ್ಷಣವಾಗಿದೆ.

## ಹನ್ನೆರಡನೇ ಹದೀಸು

ಬಹು| ಇಬ್ನು ಮನೀಅ್ ವರದಿ ಮಾಡುತ್ತಾರೆ.

عن أبي بن كعب أن عمر بن الخطاب أمره أن يصلي بالليل في رمضان فقال: إن الناس يصومون النهار ولا يحسنون أن يقرأوا فلو قرأت عليهم بالليل، فقال: يا أمير المؤمنين هذا شيء لم يكن، فقال: قد علمت ولكنه حسن فصلى بهم عشرين ركعة. (ابن منيع).

ಬಹು| ಉಬಯ್ಯ್ (ರ)ರವರಿಂದ ವರದಿ : ಉಮರ್ (ರ)ರವರು ಅವರಲ್ಲಿ ರಮ್‌ಝಾನಿನ ರಾತ್ರಿಗಳಲ್ಲಿ ಜನರಿಗೆ ಇಮಾಮರಾಗಿ ತರಾವೀಹ್ ನಮಾಜು ಮಾಡಲು ಆಜ್ಞಾಪಿಸುತ್ತಾ ಹೀಗೆ ಹೇಳಿದರು "ಜನರು ಹಗಲು ಉಪವಾಸ ಆಚರಿಸುತ್ತಾರೆ. ಆದರೆ ಅವರಿಗೆ ಉತ್ತಮವಾಗಿ ಖುರ್ ಆನ್ ಪಠಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ತಾವು ರಮ್‌ಝಾನಿನ ರಾತ್ರಿಗಳಲ್ಲಿ ಜನರಿಗೆ ಇಮಾಮರಾಗಿ ನಮಾಜು ಮಾಡಬೇಕು. ಆಗ ಉಬಯ್ಯ್ (ರ)ರವರು ಕೇಳಿದರು "ಓ ಅಮೀರ್

ರವರೇ, ಇದು ಇಷ್ಟರವರೆಗೆ ನಡೆಯದ ಕಾರ್ಯವಲ್ಲವೇ? ಉಮರ್ (ರ)ರವರು ಹೇಳಿದರು. "ಹೌದು, ನನಗೆ ತಿಳಿದಿದೆ. ಆದರೆ ಇದು ಅತ್ಯುತ್ತಮವಾದ ಕಾರ್ಯವಾಗಿದೆ". ತದನ ನಂತರ ಉಬಯ್ಯ್ (ರ)ರವರು ಜನರಿಗೆ ಇಮಾಮರಾಗಿ ಇಪ್ಪತ್ತು ರಕಅತ್ (ತರಾವೀಹ್) ನಮಾಜು ನಿರ್ವಹಿಸಿದರು". (ಕಂಝುಲ್ ಉಮ್ಮಾಲ್ 409/8)

ಹೀಗೆ ಅಲ್ಲಾಮ ಮುಹಮ್ಮದ್ ಝಕರಿಯ್ಯಾ ತನ್ನ ಔಜಝುಲ್ ಮಸಾಲಿಕ್ 306/2 ರಲ್ಲೂ ಈ ಹದೀಸನ್ನು ವರದಿ ಮಾಡಿದ್ದಾರೆ.

## ಹದಿಮೂರನೇ ಹದೀಸು

ಬಹು| ಇಮಾಂ ಮುಹಮ್ಮದುಬ್ನು ನಸ್ರ್ (ರ)ರವರು ವರದಿ ಮಾಡುತ್ತಾರೆ.

عن محمد بن كعب القرظي كان الناس يصلون في زمان عمر بن الخطاب رضي الله عنه في رمضان عشرين ركعة

يطيلون فيها القراءة ويوترون بثلاثة

ಮುಹಮ್ಮದುಬ್ನು ಕಅಬಿಲ್ ಕುರಳಿ (ರ)ರವರಿಂದ ವರದಿ. ಉಮರ್ (ರ)ರವರ ಕಾಲದಲ್ಲಿ ಜನರು ಇಪ್ಪತ್ತು ರಕಅತ್ ತರಾವೀಹ್ ಮತ್ತು ಮೂರು ರಕಅತ್ ವಿತ್ರ್ ನಿರ್ವಹಿಸುತ್ತಿದ್ದರು. ಮಾತ್ರವಲ್ಲ ನಮಾಜಿನಲ್ಲಿ ಅವರು ದೀರ್ಘವಾಗಿ ಕುರ್‌ಆನ್ ಪಠಿಸುತ್ತಿದ್ದರು. (ಖಿಯಾಮುಲ್ಲೈ ಪುಟ 91)

ಅದೇ ರೀತಿ ಅಲ್ಲಾಮ ಮುಹಮ್ಮದ್ ಝಕರಿಯ್ಯಾ ತನ್ನ ಔಜಝುಲ್ ಮಸಾಲಿಕ್ 306/2ರಲ್ಲೂ ಈ ಹದೀಸನ್ನು ವರದಿ ಮಾಡಿದ್ದಾರೆ.

ಮುಹಮ್ಮದುಬ್ನು ಕಅಬಿಲ್ ಕುರಳಿ (ರ)

ಇವರು ಹಿಜರಿ 40ರಲ್ಲಿ ಜನಿಸಿ 108ರಲ್ಲಿ ನಿಧನರಾದ ಪ್ರಖ್ಯಾತ ತಾಬಿಈ ಆಗಿದ್ದಾರೆ. ಬಹು| ಅಬೂ ಅಯ್ಯೂಬಿಲ್ ಅನ್ಸಾರಿ (ರ), ಅಬೂ ಹುರೈರಾ (ರ), ಮುಆವಿಯ (ರ), ಝೈದುಬ್ನು ಅರ್ಕಂ (ರ), ಇಬ್ನು ಅಬ್ಬಾಸ್ (ರ), ಜಾಬಿರ್ (ರ), ಅನಸ್ (ರ), ಬರಾಉಬ್ನು ಆಝಿಬ್ (ರ) ಮುಂತಾದ ಸ್ವಹಾಬಿವರ್ಯರಿಂದ ಹದೀಸು ವರದಿ ಮಾಡಿರುತ್ತಾರೆ.

ಇವರ ಕುರಿತು ಇಬ್ನುಸಅದ್ (ರ)ಹೇಳುತ್ತಾರೆ.

كان ثقة عالما كثير الحديث ورعا

"ಅವರು ವಿಶ್ವಸ್ಥರೂ, ವಿದ್ವಾಂಸರೂ, ಸೂಕ್ಷ್ಮತೆಯುಳ್ಳವರೂ ಹಾಗೂ ಹೆಚ್ಚು ವರದಿ ಮಾಡುವವರೂ ಆಗಿರುತ್ತಾರೆ". (ತಹ್‌ದೀಬುಲ್ ಕಮಾಲ್ 342/26)

ಇಮಾಂ ಇಜ್‌ಲೀ (ರ)ರವರು ಹೇಳುತ್ತಾರೆ.

تابعي ثقة رجل صالح عالم بالقران

"ಅವರು ಖುರ್‌ಆನಿನ ಕುರಿತು ಅಗಾಧ ಪಾಂಡಿತ್ಯವುಳ್ಳ ಉತ್ತಮ ವ್ಯಕ್ತಿಯೂ, ವಿಶ್ವಸ್ಥರೂ ಆದ ತಾಬಿಈ ಆಗಿದ್ದಾರೆ". (ತಹ್‌ದೀಬುಲ್ ಕಮಾಲ್ 342/26)

ಒಟ್ಟಿನಲ್ಲಿ ಎಲ್ಲಾ ವರದಿಗಳು ಉಮರ್ (ರ)ರವರ ಕಾಲದಲ್ಲಿ ಇಪ್ಪತ್ತು ರಕಅತ್ ನಿರ್ವಹಿಸಲಾಗುತ್ತಿತ್ತು ಎಂಬುದಕ್ಕೆ ಸಾಕ್ಷ್ಯ ವಹಿಸುತ್ತದೆ.

# ಉಮರ್ (ರ) 11 ರಕಅತ್ ನಿರ್ವಹಿಸಲು ಆಜ್ಞಾಪಿಸಿದ್ದರೇ?

ಉಮರ್ (ರ) ರವರ ಕಾಲದಲ್ಲಿ ತರಾವೀಹ್ ಇಪ್ಪತ್ತು ರಕ್‌ಅತ್ತು ಆಗಿತ್ತು ಎಂಬುದಕ್ಕೆ ಹದೀಸುಗಳ ಶೃಂಖಲೆಯನ್ನೇ ಮಂಡಿಸಿಯಾಯಿತು. ಆದರೆ ನೂತನವಾದಿಗಳು ತಮ್ಮ ನಿತ್ಯ ವಾಡಿಕೆಯಾದ ವ್ಯಾಜ್ಯ ಹೇಳಿಕೆಗಳನ್ನೇ ಬಿತ್ತರಿಸುತ್ತಿದ್ದಾರೆ. ಒಬ್ಬ ಮೌಲವಿ ಬರೆಯುವುದನ್ನು ನೋಡಿ, "ಸಾಇಬುಬ್ನು ಯಝೀದ್ (ರ)ರವರಿಂದ ಮುಹಮ್ಮದುಬ್ನು ಯೂಸುಫ್ ಮುಖಾಂತರ ಇಮಾ ಮಾಲಿಕ್(ರ) ಹೇಳುತ್ತಾರೆ, ಉಮರ್ (ರ)ರವರು ಉಬಯ್ಯುಬ್ನು ಕಅಬ್(ರ) ಹಾಗೂ ತಮೀಮುದ್ದಾರಿ (ರ)ರವರೊಂದಿಗೆ ಹನ್ನೊಂದು ರಕಅತ್‌ಗಳ ನಮಾಜಿಗೆ ಇಮಾಮಾಗಿ ನಿರ್ವಹಿಸಲು ಆದೇಶಿಸಿದರು." (ಪವಿತ್ರ ಸಂದೇಶ 1998 ಪುಟ 73)

ಪ್ರಸುತ ಹದೀಸನ್ನು ಇಮಾಂ ಮಾಲಿಕ್ (ರ) ತನ್ನ ಮುವತ್ತಾದಲ್ಲೂ ಇಮಾಂ ಬೈಹಖೀ (ರ) ತನ್ನ ಸುನನುಲ್ ಕುಬ್‌ರಾದಲ್ಲೂ ವರದಿ ಮಾಡಿದ್ದಾರೆ.

ಆದರೆ ಈ ಹದೀಸು ಹಲವು ಕಾರಣಗಳಿಂದ ಹನ್ನೊಂದು ರಕಅತ್ ನಮಾಜಿಗೆ ಆಧಾರ ಯೋಗ್ಯವಲ್ಲ.

ಜಗತ್ ಪ್ರಸಿದ್ಧ ಹದೀಸ್ ವಿದ್ವಾಂಸರಾದ ಇಮಾಂ ಇಬ್‌ನು ಅಬ್ದಿಲ್ ಬರ್‌ (ರ) ರವರು ಇಪ್ಪತ್ತು ರಕಅತ್ತಿನ ಪುರಾವೆಗಳನ್ನೆಲ್ಲಾ ಉಲ್ಲೇಖಿಸಿದ ಬಳಿಕ ಹೇಳುತ್ತಾರೆ.

وهذا كله يشهد بأن الرواية بإحدى عشرة ركعة وهم وغلط وأن الصحيح ثلاث وعشرون وإحدى وعشرون ركعة والله أعلم

"ಈ ಪುರಾವೆಗಳೆಲ್ಲವೂ ಹನ್ನೊಂದು ರಕಅತಿನ ವರದಿಯು ಸರಿಯಿಲ್ಲವೆಂದೂ ಪ್ರಮಾದ ಸಂಭವಿಸಿದ್ದಾಗಿದೆಯೆಂದೂ ಸಾಕ್ಷ್ಯ ವಹಿಸುತ್ತದೆ. ಏಕೆಂದರೆ ಸರಿಯಾದ ವರದಿಯು ಇಪ್ಪತ್ತಮೂರು ಮತ್ತು ಇಪ್ಪತ್ತೊಂದು ರಕ್‌ಅತ್ ಎಂದಾಗಿದೆ." (ಅಲ್-ಇಸ್ತಿದ್‌ಕಾರ್ 318/2)

ಬಹು। ಇಮಾಂ ಝುರ್ಖಾನಿ(ರ) ಹೇಳುತ್ತಾರೆ.

قَالَ ابْنُ عَبْدِ الْبَرِّ : رَوَى غَيْرُ مَالِكٍ فِي هَذَا إِحْدَى وَعِشْرِينَ ، وَهُوَ الصَّحِيحُ ، وَلَا أَعْلَمُ أَحَدًا قَالَ فِيهِ إِحْدَى عَشْرَةَ إِلَّا مَالِكًا . وَيُحْتَمَلُ أَنْ يَكُونَ ذَلِكَ أَوَّلًا ثُمَّ خَفَّفَ عَنْهُمْ طُولَ الْقِيَامِ وَنَقَلَهُمْ إِلَى إِحْدَى وَعِشْرِينَ إِلَّا أَنَّ الْأَغْلَبَ عِنْدِي أَنَّ قَوْلَهُ إِحْدَى عَشْرَةَ وَهْمٌ

"ಇಬ್ನು ಅಬ್ದುಲ್ ಬರ್ರ್ (ರ) ರವರು ಹೇಳುತ್ತಾರೆ. ಇಮಾಂ ಮಾಲಿಕ್(ರ) ರವರಲ್ಲದೆ ಇತರ ಎಲ್ಲಾ ವರದಿಗಾರರು ಈ ಹದೀಸಿನಲ್ಲಿ ಹೇಳಿದ್ದು ಇಪ್ಪತ್ತೊಂದು ರಕಅತ್ ಎಂದಾಗಿದೆ. ಮಾತ್ರವಲ್ಲ ಸರಿಯಾದ ವರದಿ ಅದುವೇ ಆಗಿದೆ. ಇನ್ನು ಒಂದು ವೇಳೆ ಅದು ಹನ್ನೊಂದು ರಕಅತ್‌ಗಳು ಪ್ರಾರಂಭದಲ್ಲಿ ನಿರ್ವಹಿಸಿದ ರಕಅತ್‌ಗಳ ಸಂಖ್ಯೆಯೂ, ನಂತರ ನಿಲ್ಲುವಿಕೆಯ ದೀರ್ಘತೆಯನ್ನು ಕುಂಠಿತಗೊಳಿಸಿ ಇಪ್ಪತ್ತೊಂದು ರಕಅತ್ ನಿರ್ವಹಿಸಲೂ ಸಾಧ್ಯತೆಯಿದೆ. ಆದರೆ ನನ್ನ ಬಳಿ ಪ್ರಬಲವಾದುದು ಹನ್ನೊಂದು ರಕಅತ್ ಎಂಬುದು ಮಾಲಿಕ್ (ರ) ರವರಿಗೆ ಸಂಭವಿಸಿದ ಪ್ರಮಾದವಾಗಿದೆ." (ಅಬ್‌ಹಜುಲ್ ಮಸಾಲಿಕ್ 239/1)

ಇಬ್ನು ಅಬ್ದುಲ್ ಬರ್ರ್ (ರ) ರವರ ಪ್ರಸ್ತುತ ಉದ್ಧರಣೆಯನ್ನು ಉಲ್ಲೇಖಿಸಿದ ನಂತರ ಬಹು| ಅಲ್ಲಾಮ ಮುಹಮ್ಮದ್ ಝುಕರಿಯ್ಯಾ ಹೇಳುತ್ತಾರೆ.

والظاهر عندي ما رجحه ابن عبد البر لان جل الروايات نص في انما كانت عشرين ركعة

"ಇಬ್ನು ಅಬ್ದುಲ್ ಬರ್ರ್ (ರ) ರವರು ಹೇಳಿದ ಅಭಿಪ್ರಾಯವಾಗಿದೆ ನನ್ನ ಬಳಿ ಪ್ರಬಲವಾದುದು. ಏಕೆಂದರೆ ಮಿಕ್ಕ ವರದಿಗಳಲ್ಲಿರುವುದು ಇಪ್ಪತ್ತೊಂದು ಎಂದಾಗಿದೆ" (ಔಜಝುಲ್ ಮಸಾಲಿಕ್ 301/2)

ಆದುದರಿಂದಲೇ ಹಿಜರಿ ಐದನೇ ಶತಮಾನದಲ್ಲಿ ಜೀವಿಸಿದ್ದ ಪ್ರಖ್ಯಾತ ವಿದ್ವಾಂಸರಾದ ಇಬ್ನುಲ್ ಅರಬಿ ಹೇಳುತ್ತಾರೆ.

روى مالك ان ابي بن كعب كان يقوم باحدى عشرة ركعة وخالفه الناس فقالوا احدى وعشرين ركعة

"ಇಮಾಂ ಮಾಲಿಕ್ (ರ) ರವರು ಮಾತ್ರ ಉಬಯ್ (ರ) ರವರು ಹನ್ನೊಂದು ರಕಅತ್ತು ನಿರ್ವಹಿಸಿದರು ಎಂದು ವರದಿ ಮಾಡಿದ್ದಾರೆ. ಆದರೆ ಜನರೆಲ್ಲರೂ ಅವರಿಗೆ ವಿರುದ್ಧವಾಗಿದ್ದಾರೆ. ಅವರೆಲ್ಲರೂ ಹೇಳುವುದು ಉಬಯ್ಯ್ (ರ) ಇಪ್ಪತ್ತೊಂದು ರಕಅತ್ ನಿರ್ವಹಿಸಿದರು" ಎಂದಾಗಿದೆ. (ಅರಿಳತುಲ್ ಅಹ್‌ವದ್ಸಿ 19/4)

ಒಟ್ಟಿನಲ್ಲಿ ಎಲ್ಲಾ ಪರಂಪರೆಗಳಲ್ಲೂ ಇಪ್ಪತ್ತೊಂದು ರಕಅತ್ತೆಂದು ವರದಿಯಾಗಿರುವಾಗ ಇಮಾಂ ಮಾಲಿಕ್ (ರ) ರವರು ಹನ್ನೊಂದು ರಕಅತ್ ಎಂದು ವರದಿ ಮಾಡಿದ್ದಾರೆ. ಇದು ಇಮಾಂ ಮಾಲಿಕ್ (ರ) ರವರ ವರದಿಯಲ್ಲಿ ದೋಷ ಸಂಭವಿಸಿದೆ ಎಂಬುದನ್ನು ಸೂಚಿಸುತ್ತದೆ. ಏಕೆಂದರೆ ಬಹು| ಸಾಇಬುಬ್ನುಯಝೀದ್ (ರ)ರವರಿಂದ ಯಝೀದುಬ್ನು ಖುಸೈಫಾ (ರ), ಮುಹಮ್ಮದುಬ್ನು ಯೂಸುಫ್ (ರ) ಹಾಗೂ ಹಾರಿಸುಬ್ನು ಅಬ್ದಿರ್ರಹ್ಮಾನ್ ಹೀಗೆ ಮೂರು ಮಂದಿ ವರದಿ ಮಾಡಿದ್ದಾರೆ. ಇದರಲ್ಲಿ ಯಝೀದುಬ್ನು ಖುಸೈಫಾ ಮುಖಾಂತರ ಇಮಾಂ ಬೈಹಖೀ ತನ್ನ ಸುನನುಲ್ ಕುಬ್‌ರಾ 496/2 ರಲ್ಲೂ, ಮಅರಿಫತುಸ್ಸುನನಿ ವಲ್ ಅಸಾರ್ 42/4ರಲ್ಲೂ, ಮುಹಮ್ಮದುಬ್ನು ನಸ್ರ್ ತನ್ನ ಖಿಯಾಮುಲ್ಲೈಲ್ ಪುಟ 91 ರಲ್ಲೂ, ಇಮಾಂ ಮಾಲಿಕ್ (ರ) ತನ್ನ ಮುವತ್ತಾದಲ್ಲೂ ಇಪ್ಪತ್ತು ರಕಅತ್ ವರದಿ ಮಾಡಿದ್ದಾರೆ. ಅದರಂತೆ ಮುಹಮದುಬ್ನು ಯೂಸುಫ್ ಮುಖಾಂತರ ಇಮಾಂ ಅಬ್ದುರ್ರಝಾಖ್ ತನ್ನ ಮುಸನ್ನಫ್ 260/4ರಲ್ಲೂ, ಇಮಾಂ ಮುಹಮ್ಮದುಬ್ನುನಸ್ರ್ ತನ್ನ ಖಿಯಾಮುಲ್ಲೈಲ್ ನಲ್ಲೂ, ಅಬ್ದುಲ್ ಅಝೀಝ್ ದರಾವರ್ದೀ ತನ್ನ ಸುನನಿನಲ್ಲೂ ಇಪ್ಪತ್ತು ರಕಅತ್ತನ್ನು ವರದಿ ಮಾಡಿದ್ದಾರೆ. ಅದೇ ರೀತಿ ಹಾರಿಸುಬ್ನು ಅಬ್ದಿರ್ರಹ್ಮಾನ್ ಮುಖಾಂತರ ಇಮಾಂ ಅಬ್ದುರ್ರಝಾಖ್ ತನ್ನ ಮುಸನ್ನಫ್ 261/4 ರಲ್ಲೂ ಇಪ್ಪತ್ತು ರಕಅತ್ ವರದಿ ಮಾಡಿದ್ದಾರೆ.

ಆದರೆ ಇಮಾಂ ಮಾಲಿಕ್ (ರ)ರವಲ್ಲದೆ ಬೇರೆ ಪರಂಪರೆಗಳಲ್ಲೂ ಹನ್ನೊಂದು ರಕಅತ್ತು ವರದಿಯಾಗಿದೆಯೆಂದೂ ಝುರ್ಖಾನಿ ತನ್ನ ಮುವತ್ತಾದ ವ್ಯಾಖ್ಯಾನದಲ್ಲಿ ಪ್ರಸ್ತಾಪಿಸಿದ್ದಾರೆ. ಅವರು ಹೇಳುವುದನ್ನು ನೋಡಿ.

وقوله ان مالكا انفرد به ليس كما قال فقد رواه سعيد بن منصور من وجه اخر عن محمد بن يوسف فقال احدى عشرة

ಇಮಾಂ ಮಾಲಿಕ್ (ರ)ರವರು ಮಾತ್ರ ಹನ್ನೊಂದು ರಕ್‌ಅತ್ ವರದಿ ಮಾಡಿದ್ದಾರೆ ಎಂಬ ಇಬ್ನು ಅಬ್ದುಲ್ ಬರ್ (ರ) ರವರ ಹೇಳಿಕೆಯು ಸರಿಯಲ್ಲ. ಏಕೆಂದರೆ ಸಈದುಬ್ನು ಮನ್ಸೂರ್ (ರ)ರವರು ಮುಹಮ್ಮದುಬ್ನು ಯೂಸುಫ್‌ರವರಿಂದ ಹನ್ನೊಂದು ರಕಅತ್ ವರದಿ ಮಾಡಿದ್ದಾರೆ. (ಅಬ್‌ಹಜುಲ್ ಮಸಾಲಿಕ್ 239/1)

ಅದೇ ರೀತಿ ಮುಹಮ್ಮದುಬ್ನು ಯೂಸುಫ್‌ರವರಿಂದ ಯಹ್ಯಾಬ್ನುಸಈದ್ ಹನ್ನೊಂದು ರಕಅತ್ ವರದಿ ಮಾಡಿದ್ದಾಗಿ ಮುಸನ್ನಫ್ ಇಬ್ನು ಅಬೀಶೈಬಾ 284/2 ರಲ್ಲಿ ಉಲ್ಲೇಖಿಸಲಾಗಿದೆ.

ಒಟ್ಟಿನಲ್ಲಿ ಮುಹಮ್ಮದುಬ್ನು ಯೂಸುಫ್‌ರವರಿಂದ ಇಮಾಂ ಮಾಲಿಕ್ (ರ) ರವರು ಹನ್ನೊಂದು ರಕಅತ್ ವರದಿ ಮಾಡಿದಂತೆ ಸಈದುಬ್ನು ಮನ್ಸೂರ್ (ರ)ರವರೂ, ಯಹ್ಯಾಬ್ನು ಸಈದ್(ರ)ರವರೂ ವರದಿ ಮಾಡಿದ್ದಾರೆ.

ಹಾಗಾದರೆ ಯತಾರ್ಥದಲ್ಲಿ ಇಲ್ಲಿ ಪ್ರಮಾದ ಸಂಭವಿಸಿದ್ದು ಯಾರಿಗಾಗಿದೆ? ಪರಿಶೋಧಿಸೋಣ.

ಬಹು| ಅಲ್ಲಾಮ ಮುಹಮ್ಮದ್ ಝಕರಿಯ್ಯಾ ಹೇಳುತ್ತಾರೆ,

لكن الوهم عندي فيه عن محمد بن يوسف لان نسبة الوهم الى الامام ابعد من النسبة اليه

ಇಲ್ಲಿ ನಿಜವಾಗಿ ಪ್ರಮಾದ ಸಂಭವಿಸಿದ್ದು ಮುಹಮ್ಮದುಬ್ನು ಯೂಸುಫ್‌ರವರಿಗಾಗಿದೆ. ಏಕೆಂದರೆ ಇಮಾಂ ಮಾಲಿಕ್ (ರ)ರವರಿಗೆ ಪ್ರಮಾದ ಸಂಭವಿಸದೆ ಎಂದು ಹೇಳುವುದು ಮುಹಮ್ಮದುಬ್ನು ಯೂಸುಫ್ (ರ)ರವರಿಗೆ ಪ್ರಮಾದ ಸಂಭವಿಸಿದೆ ಎಂದು ಹೇಳುವುದಕ್ಕಿಂತ ವಿದೂರ ನ್ಯಾಯವಾಗಿದೆ" (ಔಜರುಝುಲ್ ಮಸಾಲಿಕ್ 301/2)

ಶೈಖ್ ಮುಹಮ್ಮದ್ ಝುಕರಿಯ್ಯಾರವರ ಈ ಹೇಳಿಕೆಯು ಅತ್ಯಂತ ಸರಿಯಾಗಿದೆ. ಏಕೆಂದರೆ ಸಾಇಬುಬ್ನು ಯಝೀದ್ (ರ)ರವರಿಂದ ಈ ವಿಷಯದಲ್ಲಿ ಒಟ್ಟು ಹನ್ನೆರಡು ಹದೀಸುಗಳು ವರದಿಯಾಗಿದೆ. ಅದರಲ್ಲಿ ಏಳು ಹದೀಸುಗಳನ್ನು ಮುಹಮ್ಮದುಬು ಯೂಸೂಫ್‌ರವರೂ, ನಾಲ್ಕು ಹದೀಸುಗಳನ್ನು ಯಝೀದುಬ್ನು ಖುಸೈಫಾ(ರ)ರವರೂ, ಉಳಿದ ಒಂದು ಹದೀಸನ್ನು ಹಾರಿಸುಬ್ನು ಅಬ್ದುರ್ರಹ್ಮಾನ್‌ರವರೂ ವರದಿ ಮಾಡಿದ್ದಾರೆ. ಇವುಗಳಲ್ಲಿ ಯಝೀದುಬ್ನು ಖುಸೈಫಾರವರ ನಾಲ್ಕು ವರದಿಗಳಲ್ಲೂ, ಹಾರಿಸುಬ್ನು ಅಬ್ದುರಹ್ಮಾನ್‌ರವರ ಒಂದು ವರದಿಯಲ್ಲೂ ಇಪ್ಪತ್ತು ರಕಅತ್‌ಗಳೆಂದು ವರದಿಯಾಗಿದೆ. ಮುಹಮ್ಮದುಬುನು ಯೂಸುಫ್‌ರವರ ಉಳಿದ ಮೂರು ವರದಿಗಳಲ್ಲಿ ಹನ್ನೊಂದು ಎಂದೂ ಮತ್ತೊಂದರಲ್ಲಿ ಹದಿಮೂರು ಎಂದೂ ವರದಿಯಾಗಿದೆ.

ಇದರಿಂದ ಮುಹಮ್ಮದುಬ್ನು ಯೂಸುಫ್‌ರವರಿಗೆ ಇಲ್ಲಿ ಪ್ರಮಾದ ಸಂಭವಿಸಿದೆ ಎಂದು ಹಗಲು ಬೆಳಕಿನಷ್ಟು ವ್ಯಕ್ತವಾಗುತ್ತದೆ. ಕಾರಣ ಇಪ್ಪತ್ತು ರಕಅತ್ತೆಂದು ಅವರುದಾವೂದುಬ್ನು ಖೈಸ್‌ರವರಿಗೆ ವರದಿ ಮಾಡಿದ್ದಾಗಿ ಮುಸನ್ನಫ್ ಅಬ್ದುರ್ರಝಾಕ್ 4/260 ರಲ್ಲೂ ಅಬ್ದುಲ್ ಅಝೀಝುಬ್ನು ದ್ದರಾವರ್ದಿಗೆ ವರದಿ ಮಾಡಿದ್ದಾಗಿ ನೈಲುಲ್ ಔತಾರ್ 54/3ರಲ್ಲೂ ಸ್ಪಷ್ಟಪಡಿಸಲಾಗಿದೆ. ಆದರೆ ಅದೇ ಮುಹಮ್ಮದುಬ್ನುಯೂಸುಫ್‌ರವರು ಮತ್ತೊಮ್ಮೆ ಅಬ್ದುಲ್ ಅಝೀಝ್ ದರಾವರ್ದಿಯವರಿಗೂ, ಸಈದುಬ್ನು ಮನ್ಸೂರ್‌ರವರಿಗೂ ಹಾಗೂ ಯಹ್ಯಾಬ್ನು ಸಈದ್‌ರವರಿಗೂ ಹನ್ನೊಂದು ಎಂದೂ ಮುಹಮ್ಮದುಬ್ನು ಇಸ್ ಹಾಖ್‌ರವರಿಗೆ ಹದಿಮೂರು ಎಂದೂ ವರದಿ ಮಾಡಿದ್ದಾರೆ. ಆದುದರಿಂದ ಒಮ್ಮೆ ಇಪ್ಪತ್ತೊಂದು ಎಂದೂ ಇನ್ನೊಮ್ಮೆ ಹನ್ನೊಂದು ಎಂದೂ ಮತ್ತೊಮ್ಮೆ ಹದಿಮೂರು ಎಂದೂ ವರದಿ ಮಾಡಿರುವಾಗ ಅವರ ಹನ್ನೊಂದು ಮತ್ತು ಹದಿಮೂರರ ವರದಿಯು ಅವರಿಗೆ ಸಂಭವಿಸಿದ ಪ್ರಮಾದವಾಗಿದೆ ಎಂದು ಖಚಿತವಾಗುತ್ತದೆ.

ಇನ್ನು ಒಂದು ವೇಳೆ ಹನ್ನೊಂದು ರಕಅತ್‌ನ ವರದಿಯನ್ನೇ ಏಕೆ ಪ್ರಮಾದವೆಂದು ಹೇಳಬೇಕು? ಇಪ್ಪತ್ತೊಂದು ರಕಅತ್‌ನ ವರದಿಯನ್ನು ಪ್ರಮಾದವೆಂದು ಹೇಳಬಾರದೆ? ಎಂದು ಮೌಲವಿಗಳು ಪ್ರಶ್ನಿಸಬಹುದು. ಆದರೆ ಹಾಗೆ ಹೇಳಲು ಸಾಧ್ಯವಿಲ್ಲ. ಕಾರಣ ಮುಹಮ್ಮದುಬ್ನು ಯೂಸುಫ್‌ರವರಲ್ಲದ ಯಝೀದುಬ್ನುಖುಸೈಫಾರವರ ನಾಲ್ಕು ವರದಿಗಳಲ್ಲೂ, ಹಾರಿಸ್(ರ)ರವರ ಒಂದು ವರದಿಯಲ್ಲೂ ಇಪ್ಪತ್ತು ರಕಅತ್ ಎಂದೂ ವರದಿಯಾಗಿದೆ. ಮಾತ್ರವಲ್ಲ ಸ್ವಹಾಬಿಗಳು ಒಮ್ಮತವಾದದ್ದೂ ಇಪ್ಪತ್ತು ರಕಅತ್‌ನಲ್ಲಾಗಿದೆ.

ಇನ್ನು ಮುಹಮ್ಮದುಬ್ನು ಯೂಸುಫ್‌ರವರು ಅವಿತರ್ಕಿತವಾದ ವ್ಯಕ್ತಿಯಾಗಿದ್ದಾರೆ. ಯಝೀದುಬ್ನು ಖುಸೈಫಾ, ಹಾರಿಸುಬ್ನು ಅಬ್ದುರ್ರಹ್ಮಾನ್ ರವರ ಕುರಿತು ಆಕ್ಷೇಪಗಳಿವೆ. ಆದುದರಿಂದ ಮುಹಮ್ಮದುಬ್ನು ಯೂಸುಫ್‌ರವರಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಬೇಕು ಎಂದು ಮೌಲವಿಗಳು ಹೇಳುವುದುಂಟು. ಆದರೆ ಈ ವಾದವು ಅರ್ಥ ಶೂನ್ಯವಾಗಿದೆ. ಕಾರಣ ಮುಹಮ್ಮದ್ ಯೂಸುಪ್‌ರವರ ಮೂರು ವರದಿಗಳಲ್ಲೇ ಇಪ್ಪತ್ತೊಂದು ರಕಅತ್ ಎಂದು ವರದಿಯಾಗಿದೆ. ಆದುದರಿಂದ ಅವರಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದರೂ ಇಲ್ಲದಿದ್ದರೂ ಎರಡೂ ಸಮಾನವಾಗಿದೆ.

ಹದಿಮೂರು ರಕಅತ್ ಎಂದು ಪ್ರಸ್ತಾಪಿಸಿದ ವರದಿಯು ದುರ್ಬಲವಾಗಿದೆ. ಕಾರಣ ಅದನ್ನುದ್ಧರಿಸಿದ ಮುಹಮ್ಮದುಬ್ನು ಇಸ್‌ಹಾಖ್ ಎಂಬುವರು ದುರ್ಬಲರಾದ ವ್ಯಕ್ತಿಯಾಗಿದ್ದಾರೆ.

ಬಹು| ಇಮಾಂ ಖತೀಬುಲ್ ಬಗ್ದಾದ್ ಹೇಳುತ್ತಾರೆ,

محمد بن اسحاق كذاب

"ಮುಹಮ್ಮದು ಬಿನ್ ಇಸ್‌ಹಾಕ್ ಸುಳ್ಳನ್ನೇ ಹೇಳುವವರಾಗಿದ್ದಾರೆ." (ತಾರೀಖುಲ್ ಬಗ್ದಾದ್ 222/1)

ಅದೇ ರೀತಿ ಧ್ಹಹಬಿ ತನ್ನ ಮೀಝಾನುಲ್ ಇಅ್‌ತಿದಾಲ್ 24/3 ರಲ್ಲೂ ಇಮಾಂ ಅಸ್ಖಲಾನಿ (ರ) ತನ್ನ ತಹ್‌ಝೀಬ್ 38/9 ರಲ್ಲೂ ವ್ಯಕ್ತಪಡಿಸಿದ್ದಾರೆ.

(II) ಪ್ರಸ್ತುತ ಹದೀಸ್‌ನಲ್ಲಿ ಹೇಳಿದ ಹನ್ನೊಂದು ರಕಅತ್ ಎಂಬುದು ಪ್ರಮಾದವಲ್ಲವೆಂದು ಸಂಕಲ್ಪಿಸಿದರೂ ಸಹ ಇದು ಹನ್ನೊಂದು ರಕಅತ್ ತರಾವೀಹ್‌ಗೆ ಪುರಾವೆಯಾಗಲಾರದು. ಕಾರಣ ಇಲ್ಲಿ ಹನ್ನೊಂದು ರಕಅತ್ ನಿರ್ವಹಿಸಲು ಆದೇಶಿಸಿದರು ಎಂಬುದು ಉಬಯ್ಯ್ ಹಾಗೂ ತಮೀಮುದ್ದಾರಿಯವರಿಂದ ಪ್ರತಿಯೊಬ್ಬರಲ್ಲೂ ನಿರ್ವಹಿಸಲು ಆದೇಶಿಸಿದ ರಕಅತ್‌ಗಳಾಗಿವೆ. ಆಗ ತರಾವೀಹ್ ಇಪ್ಪತ್ತು ರಕಅತ್ ಆಗುತ್ತದೆ. ಇದು ಹದೀಸಿನಿಂದಲೇ ತುಂಬಾ ಸ್ಪಷ್ಟವಾಗಿ ತಿಳಿದುಬರುತ್ತದೆ.

ಪ್ರಸ್ತುತ ಹದೀಸು ಹೀಗೆ ವರದಿಯಾಗಿದೆ.

وحدثني عن مالك عن محمد بن يوسف عن السائب بن يزيد أنه قال :أمر عمر بن الخطاب أبي بن كعب وتميما الداري أن يقوما للناس بإحدى عشرة ركعة

ಸಾಇಬುಬ್ನುಯಝೀದ್ (ರ)ರವರಿಂದ ನಿವೇದನೆ: ಅವರು ಹೇಳುತ್ತಾರೆ. ಬಹು| ಉಮರ್(ರ)ರವರು ಉಬಯ್ಯುಬ್ನು ಕಅಬ್(ರ)ಹಾಗೂ ತಮೀಮುದ್ದಾರಿ (ರ) ಅವರಿಬ್ಬರಲ್ಲೂ ಜನರಿಗೆ ಇಮಾಮಾಗಿ ಹನ್ನೊಂದು ರಕಅತ್ ನಿರ್ವಹಿಸಲು ಆಜ್ಞಾಪಿಸಿದರು". (ಮುವತ್ತಾ 40)

ಇಲ್ಲಿ ಇಬ್ಬರಲ್ಲೂ ಹನ್ನೊಂದು ರಕಅತ್ ನಿರ್ವಹಿಸಲು ಆದೇಶಿಸಿದರು ಎಂದಾಗಿದೆ ಹದೀಸಿನಲ್ಲಿ ವರದಿಯಾದದ್ದು. ಆದುದರಿಂದ ತರಾವೀಹ್ ಇಪ್ಪತ್ತು ರಕಅತ್ ಆಗಿದೆ ಎಂಬುದಕ್ಕೆ ಇದು ವಿರುದ್ಧವಲ್ಲ.

ಬಹು|ಅಲ್ಲಾಮ ಮುಹಮ್ಮದ್ ಝಕರಿಯ್ಯಾ ಹೇಳುತ್ತಾರೆ,

ان رواية احدى وعشرين باعتبار مجموع ما صلياه واحدى عشرة باعتبار كل واحد منهما فكان يصلى كل واحد منهما عشرا عشرا والواحد الوتر يصلي مرة هذا ومرة هذا فيصح النسبة اليهما

ಇಪ್ಪತ್ತೊಂದು ರಕಅತ್‌ನ ವರದಿಯು ಇಬ್ಬರೂ ನಿರ್ವಹಿಸುತ್ತಿದ್ದ ಒಟ್ಟು ರಕಅತ್‌ಗಳ ಕುರಿತಾಗಿದೆ. ಹನ್ನೊಂದು ರಕಅತ್‌ನ ವರದಿಯು ಪ್ರತಿಯೊಬ್ಬರೂ ನಿರ್ವಹಿಸುತ್ತಿದ್ದ ರಕಅತ್‌ಗಳ ಸಂಬಂಧಿಸಿಯಾಗಿದೆ. ಅಂದರೆ ಅವರಿಂದ ಪ್ರತಿಯೊಬ್ಬರೂ ಹತ್ತು ರಕಅತ್‌ಗಳನ್ನು ನಿರ್ವಹಿಸುತ್ತಿದ್ದರು. ಕೊನೆಯಲ್ಲಿ ಯಾರಾದರೊಬ್ಬರು ವಿತ್ರ್ ನಮಾಜು ಮಾಡುತ್ತಿದ್ದರು. ಅದು ಒಮ್ಮೆ ಉಬಯ್ಯ್ (ರ) ನಿರ್ವಹಿಸಿದರೆ ಇನ್ನೊಮ್ಮೆ ತಮೀಮುದ್ದಾರಿ ನಿರ್ವಹಿಸುತ್ತಿದ್ದರು. ಆಗ ಇಬ್ಬರಲ್ಲೂ ಹನ್ನೊಂದು ರಕಅತ್ ನಿರ್ವಹಿಸಲು ಆಜ್ಞಾಪಿಸಿದರು ಎಂದು ಹೇಳಿದ್ದು ಸರಿಯಾಗಿದೆ. (ಔಜಝುಲ್ ಮುಸಾಲಿಕ್ 301/2)

ಹಿಜರಿ 473 ರಲ್ಲಿ ವಫಾತಾದ ಪ್ರಖ್ಯಾತ ಮುಹದ್ದಿಸರೂ, ವಿದ್ವಾಂಸರೂ ಆಗಿದ್ದ ಸುಲೈಮಾನುಲ್ ಬಾಜಿ ತನ್ನ ಮುವತ್ತಾದ ವ್ಯಾಖ್ಯಾನದಲ್ಲಿ ಹೇಳುತ್ತಾರೆ,

قَوْلُهُ أَمَرَ عُمَرُ بْنُ الْخَطَّابِ أُبَيَّ بْنَ كَعْبٍ وَتَمِيمًا الدَّارِيَّ أَنْ يَقُومَا لِلنَّاسِ يَعْنِي أَنْ يَؤُمَّاهُمْ فِي قِيَامِ رَمَضَانَ يُصَلِّي بِهِمْ أُبَيٌّ مَا قَدَرَ ثُمَّ يَخْرُجُ فَيُصَلِّي تَمِيمٌ وَالصَّوَابُ أَنْ يَقْرَأَ الثَّانِي مِنْ حَيْثُ انْتَهَى الْأَوَّلُ لِأَنَّ الثَّانِيَ إِنَّمَا هُوَ بَدَلٌ مِنْ الْأَوَّلِ وَنَائِبٌ عَنْهُ

"ಉಮರ್ (ರ)ರವರು ಉಬಯ್ಯ್ (ರ) ಹಾಗೂ ತಮೀಮುದ್ದಾರಿಯವರೊಂದಿಗೆ ಜನರಿಗೆ ಇಮಾಮರಾಗಿ ನಮಾಜು ಮಾಡಲು ಆದೇಶಿಸಿದರು ಎಂಬುದರ ಉದ್ದೇಶ ಇಬ್ಬರೂ ಇಮಾಮರಾಗಿ ನಿರ್ವಹಿಸಲು ಎಂದಾಗಿದೆ. ಆಗ ಉಬಯ್ಯ್ (ರ)ರವರು ಅವರಿಗೆ ನಿಗದಿಗೊಳಿಸಲಾದ ರಕಅತ್‌ಗಳನ್ನು ನಿರ್ವಹಿಸುವರು. ಮಾತ್ರವಲ್ಲ ಒಂದನೇ ಇಮಾಂ ನಿಲ್ಲಿಸಿದಲ್ಲಿಂದ ಎರಡನೇ ಇಮಾಂ ಓದುತ್ತಿದ್ದರು ಎಂಬುದಾಗಿದೆ ಸರಿ (ಪ್ರಾರಂಭದಿಂದಲೇ ಅಲ್ಲವೆಂದರ್ಥ) ಏಕೆಂದರೆ ಎರಡನೆಯವರು ಒಂದನೇ ಇಮಾಮಿಗೆ ಬದಲಿಯಾಗಿದ್ದರು." (ಅಲ್‌ಮುಂತಖಾ 208/1)

ಬಹು| ಶೈಖ್ ಅತಿಯ್ಯ ಹೇಳುತ್ತಾರೆ,

وقد جاء عنه رضي الله عنه جعل امامين للرجال وهما ابي بن كعب وتميم الداري وكان يقومان في الليلة الواحدة يتناوبان يبتدئ الثاني حيث ينتهي الأول كما جاء في رواية السائب بن يزيد قال امر عمر بن الخطاب ابي بن كعب وتميما الداري ان يقوما للناس باحدى عشرة ركعة

ಬಹು|ಉಮರ್ (ರ)ರವರು ಪುರುಷರಿಗೆ ಎರಡು ಇಮಾಮರುಗಳನ್ನು ನೇಮಿಸಿದ್ದರೆಂದು ವರದಿಯಾಗಿದೆ. ಅದು ಉಬಯ್ಯ್ (ರ) ಮತ್ತು ತಮೀಮುದ್ದಾರಿ (ರ)ಆಗಿದ್ದಾರೆ. ಅವರಿಬ್ಬರು ಒಂದೇ ರಾತ್ರಿಯಲ್ಲಿ ಅದಲು-ಬದಲಾಗಿ ನಮಾಜು ಮಾಡುತ್ತಿದ್ದರು. ಒಂದನೇ ಇಮಾಂ ನಿಲ್ಲಿಸಿದಲ್ಲಿಂದ ಎರಡನೇ ಇಮಾಂ ಆರಂಭಿಸುತ್ತಿದ್ದರು. ಏಕೆಂದರೆ ಬಹು| ಸಾಇಬ್ (ರ)ರವರು ವರದಿ ಮಾಡುತ್ತಾರೆ. ಬಹು| ಉಮರ್ (ರ)ರವರು ಉಬಯ್ಯ್ (ರ) ಮತ್ತು ತಮೀಮುದ್ದಾರಿ (ರ) ಯವರಿಬ್ಬರಲ್ಲೂ ಜನರಿಗೆ ಇಮಾಮರಾಗಿ ಹನ್ನೊಂದು ರಕಅತ್ ತರಾವೀಹ್ ನಮಾಜು ಮಾಡಲು ಆದೇಶಿಸಿದರು.

(ಅತ್ತ ರಾವೀಹ್ ಅಕ್‌ಸರು ಮಿನ್‌ಅಲ್ಫಿಆಮೀನ್ ಫಿ ಮಸ್ಜಿದ್ ರಸೂಲಿಲ್ಲಾಹಿ ಪು.27)

ಆದುದರಿಂದ ಸಾಬ್‌ವ್ (ರ)ರವರ ಪ್ರಸ್ತುತ ಹದೀಸು ತರಾವೀಹ್ ನಮಾಜು ಇಪ್ಪತ್ತು ರಕಅತ್ ಆಗಿದೆ ಎಂಬುದಕ್ಕೆ ವಿರುದ್ಧವಲ್ಲ.

ಈ ಸತ್ಯಾಂಶವನ್ನು ಕಂಡು ಬೆಚ್ಚಿಬಿದ್ದ ಮೌಲವಿಗಳು ತಮಗೆ ಯಾವುದೇ ರಕ್ಷೆಯಿಲ್ಲವೆಂದರಿತಾಗ ಅದರಿಂದ ಪಾರಗಲು ಕೊನೆಗೆ ಹೀಗೆ ಹೇಳುವುದುಂಟು, ಪ್ರತಿಯೊಬ್ಬರಲ್ಲೂ ಹನ್ನೊಂದು "ರಕಅತ್ ನಿರ್ವಹಿಸಲು ಆದೇಶಿಸಿದ್ದಾರೆ ಒಟ್ಟು ಇಪ್ಪತ್ತೆರಡು ರಕಅತ್‌ತ ಆಗಬೇಡವೇ? ಅಂತಹ ಒಂದು ತರಾವೀಹ್ ನಮಾಜ್ ಇಲ್ಲವಲ್ಲವೇ?"

ಯತಾರ್ಥದಲ್ಲಿ ಅದು ಅವರ ಅಜ್ಞಾನದಿಂದ ಉಂಟಾದ ಪ್ರಶ್ನೆಯಾಗಿದೆ. ಇದಕ್ಕೆ ಶೈಖ್ ಮುಹಮ್ಮದ್ ಝುಕರಿಯವರು ಹೇಳಿದ ಉತ್ತರವನ್ನು ಮೇಲೆ ಹೇಳಿಯಾಗಿದೆ. ಅದೇನೆಂದರೆ ಉಬಯ್ಯ್(ರ)ಮತ್ತು ತಮೀಮುದ್ದಾರಿಯವರಿಬ್ಬರಲ್ಲಿ ಯಾರಾದರೊಬ್ಬರು ತರಾವೀಹ್ ನಮಾಜ್ ಮಾಡಿದ ಬಳಿಕ ಒಂದು ರಕಅತ್ ವಿತ್ರ್‌ಮಾಡುತ್ತಿದ್ದರು. ಒಂದು ದಿನ ಅದನ್ನು ಉಬಯ್ಯ್ (ರ)ರವರೂ ಇನ್ನೊಂದು ದಿನ ತಮೀಮುದ್ದಾರಿ (ರ)ಯವರೂ ನಿರ್ವಹಿಸುತ್ತಿದ್ದರು. ಆಗ ಒಟ್ಟಿನಲ್ಲಿ ಇಬ್ಬರೂ ಹನ್ನೊಂದು ರಕಅತ್ ನಿರ್ವಹಿಸುತ್ತಿದ್ದರಿಂದ ಹನ್ನೊಂದು ರಕಅತ್ ನಿರ್ವಹಿಸಲು ಆದೇಶಿಸಿದರು ಎಂದು ಹೇಳಲಾಗಿದೆ.

ಬಹು|ಶೈಖ್ ಮುಹಮ್ಮದ್ ಝುಕರಿಯಾ ಹೇಳುವುದನ್ನು ನೋಡಿ.

كان يصلي كل واحد منهما عشرا عشرا والواحد الوتر يصلي مرة هذا ومرة هذا فيصح النسبة اليهما

ಬಹು|ಉಬಯ್ಯ್ (ರ)ಹಾಗೂತಮೀಮುದ್ದಾರಿ (ರ)ಯವರಿಂದ ಪ್ರತಿಯೊಬ್ಬರು ಹತ್ತು ರಕ್‌ಅತ್ ನಿರ್ವಹಿಸುತ್ತಿದ್ದರು. ಕೊನೆಗೆ ಅವರಲ್ಲೊಬ್ಬರು ವಿತ್ರ್ ನಮಾಜ್ ನಿರ್ವಹಿಸುತ್ತಿದ್ದರು. ಒಮ್ಮೆ ಅದನ್ನು ಉಬಯ್ಯ್(ರ)ರವರು ನಿರ್ವಹಿಸಿದರೆ ಮತ್ತೊಮ್ಮೆ ತಮೀಮುದ್ದಾರಿ (ರ)ರವರು ನಿರ್ವಹಿಸುತ್ತಿದ್ದರು. ಆಗ ಇಬ್ಬರಲ್ಲೂ ಹನ್ನೊಂದು ರಕ್‌ಅತ್ ನಿರ್ವಹಿಸಲು ಆದೇಶಿಸಿದರು ಎಂದು ಹೇಳಿದ್ದು ಸರಿಯಾಗಿದೆ. (ಔಜಝುಲ್ ಮಸಾಲಿಕ್ 301/2)

## ಸಾಇಬುಬ್ನು ಯಝೀದ್ (ರ)ರವರಿಂದ ವರದಿಯಾದ ಹದೀಸುಗಳ ಪಟ್ಟಿ

| ಸ್ವಹಾಬಿಯ ಹೆಸರು | ಸ್ವಹಾಬಿಯಿಂದ ವರದಿಮಾಡಿದವರ ಹೆಸರು | ಗ್ರಂಥದ ಹೆಸರು | ಗ್ರಂಥಕರ್ತರ ಹೆಸರು | ರಕಅತ್ತ್‌ಗಳ |
|---|---|---|---|---|
| 1. ಸಾಇಬುಬ್ನುಯಝೀದ್ | ಯಝೀದುಬ್ನು ಖುಸೈಫಾ | ಸುನನುಲ್ ಕುಬ್‌ರಾ | ಇಮಾಂ ಬೈಹಖೀ | 20 ಸರಿ |
| 2. ಸಾಇಬ್ (ರ) | ಯಝೀದುಬ್ನು ಖುಸೈಫಾ | ಮಅರಿಫತುಸ್ಸುನನಿವಲ್ ಆಸಾರ್ | ಇಮಾಂ ಬೈಹಖೀ | 20 ಸರಿ |
| 3. ಸಾಇಬ್ (ರ) | ಹಾರಿಸುಬ್ಬನು ಅಬ್ದುರ್ರಹ್ಮಾನ್ | ಮುಸನ್ನಫ್ | ಅಬ್ದುರ್ರಝಾಖ್ | 23ಸರಿ |
| 4. ಸಾಇಬ್ (ರ) | ಯಝೀದುಬ್ನು ಖುಸೈಫಾ | ಖಿಯಾಮುಲ್ಲೈಲ್ | ಮುಹಮ್ಮದುಬ್ನು ನಸ್ರ್ | 20 ಸರಿ |
| 5. ಸಾಇಬ್ (ರ) | ಯಝೀದುಬ್ನು ಖುಸೈಫಾ | ಮುವತ್ತಾ | ಇಮಾಂಮಾಲಿಕ್ | 20 ಸರಿ |
| 6. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಮುಸನ್ನಫ್ | ಅಬ್ದುರ್ರಝಾಖ್ | 21ಸರಿ |
| 7. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಮವಾಹಿಬುಲ್ಲದುನ್ನಿಯ್ಯ | ಇಮಾಂಖಸ್ತಲ್ಲಾನಿ | 21 ಸರಿ |
| 8. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಖಿಯಾಮುಲ್ಲೈಲ್ | ಮುಹಮ್ಮದುಬನ್ನು ನಸ್ರ್ | 21 ಸರಿ |
| 9. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಮುಸನ್ನಫ್ | ಇಬ್ನು ಅಬೀಶೈಬಾ | 11 ಸರಿಯ |
| 10. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಮುವತ್ತಾ | ಇಮಾಂ ಮಾಲಿಕ್ | 11ಸರಿಯ |
| 11. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಸುನನ್ | ಸಈದುಬ್ನು ಮನ್ಸೂರ್ | 11ಸರಿಯ |
| 12. ಸಾಇಬ್ (ರ) | ಮುಹಮ್ಮದುಬ್ನು ಯೂಸುಫ್ | ಖಿಯಾಮುಲ್ಲೈಲ್ | ಮುಹಮ್ಮದುಬ್ನು ನಸ್ರ್ | 13 ಸರಿಯ |